ಮಾಲೂರು ತಾಲ್ಲೂಕು, ಇವರ ಹೆಸರಿನಲ್ಲಿರುವ ಸ್ಥಿರಾಸ್ತಿಗಳನ್ನು ಮೇಲೆ ವಿವರಿಸಲಾದ ಅದಿಭಾರ ಪ್ರಕರಣದ ತೀರ್ಪನ್ನು ಕಾಯ್ದಿರಿಸಿ ಷರತ್ತುಗಳಿಗೊಳಪಟ್ಟು ಜಪ್ತಿ ಮಾಡಲು ಆದೇಶಿಸಿರುತ್ತೇನೆ.

ಆದ್ದರಿಂದ ಶ್ರೀ ಎನ್. ನಾರಾಯಣಸ್ವಾಮಿ, ಮಾಜಿ ವ್ಯವಸ್ಥಾಪಕ ನಿರ್ದೇಶಕರು, ದ್ಯಾಪಸಂದ್ರ ರೇಷ್ಮೆ ಬೆಳೆಗಾರರ ಹಾಗೂ ರೈತರ ಸೇವಾ ಸಹಕಾರ ಸಂಘ: ಬ್ಯಾಂಕ್ ನಿ, ಮಾಲೂರು ತಾಲ್ಲೂಕು, ಇವರು ಈ ಷರತ್ತುಗಳಿಗೊಳಪಟ್ಟು ಆದೇಶವನ್ನು ತೆರವು ಮಾಡಿಸಲು ಇಚ್ಚಿಸಿದಲ್ಲಿ ರೂ.43,86,117.00 ಗಳನ್ನು ಕೋಲಾರ ಜಿಲ್ಲಾ ಸಹಕಾರ ಕೇಂದ್ರಬ್ಯಾಂಕ್ ನಿ., ಇದರ ಕೇಂದ್ರ ಕಛೇರಿಯಲ್ಲಿ ಅಮಾನತೆ ಖಾತೆಯಲ್ಲಿ ರೇವಣಿ ಮಾಡಿ ರೇವಣಿ ಮಾಡಿದ ಬಗ್ಗೆ ದಾಖಲೆಗಳನ್ನು ದಿನಾಂಕ:19.06.2006ರ ಒಳಗೆ ಈ ಕಛೇರಿಗೆ ತಂದೊದಗಿಸಲು ಸೂಚಿಸಿದೆ. ತಪ್ಪಿದಲ್ಲಿ ಈ ಆದೇಶವನ್ನು ಸ್ಥಿರಗೊಳಿಸಲಾಗುವುದೆಂದು ತಿಳಿಯತಕ್ಕದ್ದು.

ಈ ಕೆಳಗೆ ನಮೂದಿಸಿರುವ ಷೆಡ್ಯೂಲ್‌ನಲ್ಲಿ ಸೂಚಿಸಿರುವ ಸ್ಥಿರಾಸ್ತಿಯನ್ನು ಯಾರಾದರೂ ಕೊಂಡುಕೊಳ್ಳಲು: ಪಡೆದುಕೊಳ್ಳಲು ಉದ್ದೇಶಿಸಿದ್ದಲ್ಲಿ ಸದರೀಯವರು ಈ ಮೇಲೆ ತಿಳಿಸಲಾಗಿರುವ ಜಪ್ತಿ ಆದೇಶದ ನೋಟೀಸ್ ಷರತ್ತಿಗೊಳಪಟ್ಟಿರುತ್ತದೆ.

**"ಷೆಡ್ಯೂಲ್"**

ಈ ಕೆಳಗಿನ ಸ್ವತ್ತುಗಳು ಶ್ರೀ ಎನ್. ನಾರಾಯಣಸ್ವಾಮಿ ಬಿನ್ ನಂಜಪ್ಪ, ಮಾಜಿ ವ್ಯವಸ್ಥಾಪಕ ನಿರ್ದೇಶಕರು, ದ್ಯಾಪಸಂದ್ರ ರೇಷ್ಮೆ ಬೆಳೆಗಾರರ ಹಾಗೂ ರೈತರ ಸೇವಾ ಸಹಕಾರ ಬ್ಯಾಂಕ್ ನಿ., ಮಾಲೂರು ತಾಲ್ಲೂಕು, ಇವರಿಗೆ ಸಂಬಂಧಿಸಿದ ಆಸ್ತಿಯ ವಿವರಗಳಾಗಿರುತ್ತದೆ.

| ಕ್ರಮ ಸಂಖ್ಯೆ | ಕಬ್ಜೆದಾರರ ಹೆಸರು ಮತ್ತು ಸ್ವತ್ತಿನ ಸ್ಥಳ | ಖಾತೆ ನಂ. ಹಿಸ್ಸಾ | ಸರ್ವೆ ನಂ. | ವಿಸ್ತೀರ್ಣ | ತರಹೆ |
|---|---|---|---|---|---|
| 1. | ಎನ್. ನಾರಾಯಣಸ್ವಾಮಿ ಬಿನ್ ನಂಜಪ್ಪ, ಬೈರ್ನಹಳ್ಳಿ ಗ್ರಾಮ, ಕಸಬಾ ಹೋಬಳಿ. | 242 | 8 | 0.08 | ಖುಷ್ಕಿ |
| 2. | ಎನ್. ನಾರಾಯಣಸ್ವಾಮಿ ಬಿನ್ ನಂಜಪ್ಪ, ಬೂವಿಹಳ್ಳಿ ಗ್ರಾಮ, ಟೇಕಲ್ ಹೋಬಳಿ. | 39 | 18 | 2.36 | ಖುಷ್ಕಿ |
| 3. | ಎನ್. ನಾರಾಯಣಸ್ವಾಮಿ ಬಿನ್ ನಂಜಪ್ಪ, ಬೈರ್ನಹಳ್ಳಿ ಗ್ರಾಮ. | 242<br>ಪಿ-18 | 10 | 3.00 | ಖುಷ್ಕಿ |
| 4. | ಎನ್. ನಾರಾಯಣಸ್ವಾಮಿ ಬಿನ್ ನಂಜಪ್ಪ, ತೊರಲಕ್ಕಿ ಗ್ರಾಮ, ಟೇಕಲ್ ಹೋಬಳಿ. | 134 | 5 | 3.21 | ಖುಷ್ಕಿ |
| 5. | ಎನ್. ನಾರಾಯಣಸ್ವಾಮಿ ಬಿನ್ ನಂಜಪ್ಪ, ಮಾಲೂರು ಕಸಬಾ. | 364<br>ಪಿ-28 | 112 | 2.00 | ಖುಷ್ಕಿ |
| 6. | ಎನ್. ನಾರಾಯಣಸ್ವಾಮಿ ಬಿನ್ ನಂಜಪ್ಪ, ಮಾಲೂರು ಕಸಬಾ. | ಪಿ-32 | 112 | 2.00 | ಖುಷ್ಕಿ |
| 7. | ಎನ್. ನಾರಾಯಣಸ್ವಾಮಿ ಬಿನ್ ನಂಜಪ್ಪ, ಮಾಲೂರು ಕಸಬಾ. | 364<br>ಪಿ-35, ಪಿಎಲ್ | 112 | 2.00 | ಸಿ |

ಈ ನೋಟೀಸನ್ನು ಈ ದಿನ ದಿನಾಂಕ: 24.05.2006ರಂದು ನನ್ನ ಸಹಿ ಮತ್ತು ಈ ನ್ಯಾಯಾಲಯದ ಮುದ್ರೆಯೊಂದಿಗೆ ನೀಡಲಾಗಿದೆ.

ಸಹಕಾರ ಸಂಘಗಳ ಸಹಾಯಕ ಉಪನಿಬಂಧಕರು,
ಕೋಲಾರ ಉಪವಿಭಾಗ, ಕೋಲಾರ.

ಪಿ.ಆರ್.912

## ಜಿಲ್ಲಾಧಿಕಾರಿಗಳ ಕಾರ್ಯಾಲಯ, ಬೆಂಗಳೂರು ಜಿಲ್ಲೆ, ಬೆಂಗಳೂರು

## ಅಧಿಕೃತ ಜ್ಞಾಪನ

### ಸಂಖ್ಯೆ: ಎಲ್.ಆರ್.ಎಫ್/ ಸಿಆರ್/ 9/ 05-06, ಬೆಂಗಳೂರು, ದಿನಾಂಕ:17ನೇ ಮೇ, 2006

**ವಿಷಯ:** ಸೋಲಾರ್ ಆಟೋ ಕ್ಯಾರಿಯರ್ಸ್ ಪ್ರೈ.ಲಿ., ಬೆಂಗಳೂರು ಇವರು ಬೆಂಗಳೂರು ಉತ್ತರ ತಾಲ್ಲೂಕು, ದಾಸನಪುರ ಹೋಬಳಿ, ಮಾದನಾಯಕನಹಳ್ಳಿ ಗ್ರಾಮದ ಸರ್ವೆ ನಂ.55/1, 55/2 ಮತ್ತು 55/3ರಲ್ಲಿ ಒಟ್ಟು 2-25 $^1/_2$ ಎಕರೆ:ಗುಂಟೆ ಜಮೀನನ್ನು ಕರ್ನಾಟಕ ಭೂ ಸುಧಾರಣೆ ಕಾಯ್ದೆ ಕಲಂ 109 ರಡಿ ಕೈಗಾರಿಕಾ (ಸಾರಿಗೆ ಮತ್ತು ವಾಹನಗಳ ವರ್ಗಾವಣೆ ಬಾಬ್ತು ಸಂಚಾರಿ ವಾಹನಗಳನ್ನು ಶೇಖರಿಸಿಡಲು ಸ್ಥಳಾವಕಾಶ ಮತ್ತು ಕಟ್ಟಡ ನಿರ್ಮಾಣಕ್ಕಾಗಿ) ಉದ್ದೇಶಕ್ಕಾಗಿ ಖರೀದಿಸಲು ಅನುಮತಿ ಕೋರಿರುವ ಬಗ್ಗೆ.

**ಉಲ್ಲೇಖ:** (1) ಸರ್ಕಾರದ ಅಧಿಸೂಚನೆ ಸಂಖ್ಯೆ: ಶಾಇ:47/ ಶಾಸನ/ 2001: ಬೆಂಗಳೂರು, ದಿನಾಂಕ: 23.04.2003.

(2) ಸೋಲಾರ್ ಆಟೋ ಕ್ಯಾರಿಯರ್ಸ್ ಪ್ರೈ.ಲಿ., ರವರ ಮನವಿ ದಿನಾಂಕ: 09.12.2005.

(3) ಉಪ ವಿಭಾಗಾಧಿಕಾರಿಗಳು ಬೆಂಗಳೂರು ಉತ್ತರ ಉಪವಿಭಾಗ ರವರ ಪತ್ರ ಸಂಖ್ಯೆ: ಎಲ್.ಆರ್.ಎಫ್ (1) ಸಿಆರ್.82/05-06, ದಿನಾಂಕ: 28.03.2006.

ಸೋಲಾರ್ ಆಟೋ ಕ್ಯಾರಿಯರ್ಸ್ ಪ್ರೈ.ಲಿ., ಬೆಂಗಳೂರು ರವರು ಬೆಂಗಳೂರು ಉತ್ತರ ತಾಲ್ಲೂಕು, ದಾಸನಪುರ ಹೋಬಳಿ, ಮಾದನಾಯಕನಹಳ್ಳಿ ಗ್ರಾಮದ ಸರ್ವೆ ನಂ.55/1, 55/2 ಮತ್ತು 55/3 ರಲ್ಲಿ ಒಟ್ಟು 2-25 $^1/_2$ ಎಕರೆ: ಗುಂಟೆ ಜಮೀನನ್ನು ಕೈಗಾರಿಕಾ ಉದ್ದೇಶಕ್ಕಾಗಿ ಕರ್ನಾಟಕ ಭೂ ಸುಧಾರಣೆ ಕಾಯ್ದೆ ಕಲಂ 109ರಡಿ ಖರೀದಿಸಲು ನಮೂನೆ-15ಎ ರಲ್ಲಿ ಮಾಡಿರುವ ಬೇಡಿಕೆ ಹಾಗೂ ತಹಶೀಲ್ದಾರ್, ಬೆಂಗಳೂರು ಪೂರ್ವ ತಾಲ್ಲೂಕು ರವರು ನಮೂನೆ-15 ಎಎ ರಲ್ಲಿ ನೀಡಿದ ಮಾಹಿತಿ ಅನುಸರಿಸಿ ಉಪ ವಿಭಾಗಾಧಿಕಾರಿಗಳು, ಬೆಂಗಳೂರು ಉತ್ತರ ಉಪವಿಭಾಗ ರವರ ಉಲ್ಲೇಖ (3)ರ ಪತ್ರ ಸಂಖ್ಯೆ: ಎಲ್ಆರ್.ಎಫ್.(1) ಸಿಆರ್.82/ 05-06 ದಿನಾಂಕ: 28.03.2006ರಲ್ಲಿ ಪ್ರಸ್ತಾಪಿತ ಸೋಲಾರ್ ಆಟೋ ಕ್ಯಾರಿಯರ್ಸ್ ಪ್ರೈ.ಲಿ.,ಗೆ ಜಮೀನನ್ನು ಖರೀದಿಸಲು ಸದರಿ ಸಂಸ್ಥೆಗೆ ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961ರ ಕಲಂ 109(1)(11)ರಡಿ ವಿನಾಯ್ತಿ ನೀಡಲು ಶಿಫಾರಸ್ಸು ಮಾಡಿರುತ್ತಾರೆ.

ಸೋಲಾರ್ ಆಟೋ ಕ್ಯಾರಿಯರ್ಸ್ ಪ್ರೈ.ಲಿ., ಅನ್ನು ರಿಜಿಸ್ಟ್ರಾರ್ ಆಫ್ ಕಂಪನೀಸ್, ಕರ್ನಾಟಕ, ಬೆಂಗಳೂರು ಕಛೇರಿಯಲ್ಲಿ ನಂ.08:11260 ದಿನಾಂಕ: 08.05.1996 ಮತ್ತು 01.10.1999ರಂದು ನೋಂದಾಯಿಸಲ್ಪಟ್ಟಿದೆ. ಖಾತೆದಾರರು ಪ್ರಸ್ತುತ ಜಮೀನನ್ನು ಕ್ರಯದ ಮೂಲಕ ಸೋಲಾರ್ ಆಟೋ ಕ್ಯಾರಿಯರ್ಸ್ ಪ್ರೈ.ಲಿ., ಗೆ ನೀಡಲು ಕ್ರಯದ ಕರಾರು ಪತ್ರ ಮಾಡಿಕೊಂಡಿರುತ್ತಾರೆ.

ಪ್ರಸ್ತಾಪಿತ ಜಮೀನು ಪರಿಶಿಷ್ಟ ಜಾತಿ/ ಪರಿಶಿಷ್ಟ ಪಂಗಡ (ಪಿ.ಟಿ.ಸಿ.ಎಲ್.) ಕಾಯ್ದೆ ಕರ್ನಾಟಕ ಭೂ ಮಂಜೂರಾತಿ ನಿಯಮಗಳು ಹಾಗೂ ಇನ್ನಿತರ ಪರಭಾರೆ ನಿಷೇಧ ಕಾಯ್ದೆಗಳ ವ್ಯಾಪ್ತಿಗೆ ಒಳಪಡುವುದಿಲ್ಲ.

ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961ರ ಕಲಂ 109ರ ಪ್ರಕಾರ ಕೈಗಾರಿಕಾ ಉದ್ದೇಶಕ್ಕೆ 10 ಯೂನಿಟ್‌ಗಳವರೆಗೆ ಜಮೀನು ಹೊಂದಲು ಅವಕಾಶ ಕಲ್ಪಿಸಿದೆ. ಈ ಪ್ರಸ್ತಾವನೆ ಕರ್ನಾಟಕ ತಿದ್ದುಪಡಿ ಕಾಯ್ದೆ 1995ರ ಪ್ರಕಾರ ಕಲಂ 109(1)(11) ಮತ್ತು ಕರ್ನಾಟಕ ಭೂ ಸುಧಾರಣೆ ತಿದ್ದುಪಡಿ ಕಾಯಿದೆ 1961 ಕಲಂ 63, 79ಎ, 79ಬಿ ಅಥವಾ 80ಕ್ಕೆ ವಿನಾಯ್ತಿ ನೀಡಿ ಬೆಂಗಳೂರು ಉತ್ತರ ತಾಲ್ಲೂಕು, ದಾಸನಪುರ ಹೋಬಳಿ, ಮಾದನಾಯಕನಹಳ್ಳಿ ಗ್ರಾಮದ ಸರ್ವೆ ನಂ.55/1, 55/2 ಮತ್ತು 55/3 ರಲ್ಲಿ ಒಟ್ಟು 2-25$^{1}/_{2}$ ಎಕರೆ: ಗುಂಟೆ ಸೋಲಾರ್ ಆಟೋ ಕ್ಯಾರಿಯರ್ಸ್ ಪ್ರೈ.ಲಿ., ರವರಿಗೆ ಕೈಗಾರಿಕಾ ಉದ್ದೇಶಕ್ಕಾಗಿ ಖರೀದಿಸಲು ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961ರ ಕಲಂ 109(1)(11)ರಡಿ ಹಾಗೂ ಸರ್ಕಾರದ ತಿದ್ದುಪಡಿ ಅಧಿಸೂಚನೆ ಸಂಖ್ಯೆ: ಶಾಇ 47 ಶಾಸನ 2001 ಬೆಂಗಳೂರು ದಿನಾಂಕ:23.04.2003ರಂತೆ ಕೈಗಾರಿಕಾ ಉದ್ದೇಶಕ್ಕೆ 10 ಯೂನಿಟ್‌ಗಳ ವಿಸ್ತೀರ್ಣದವರೆಗೆ ಈ ಪ್ರಾಧಿಕಾರಕ್ಕೆ ಅನುಮತಿ ನೀಡಲು ಅಧಿಕಾರವಿರುತ್ತದೆ. ಅದರಂತೆ, ಈ ಕೆಳಕಂಡ ಷರತ್ತುಗಳಿಗೆ ಒಳಪಡಿಸಿ ಅನುಮತಿ ನೀಡಿದೆ.

**ಷರತ್ತುಗಳು**

1. ಯಾವ ಉದ್ದೇಶಕ್ಕಾಗಿ ಜಮೀನನ್ನು ಖರೀದಿಸಲು ಅನುಮತಿ ನೀಡಲಾಗಿದೆಯೋ ಅದೇ ಉದ್ದೇಶಕ್ಕಾಗಿ ಸದರಿ ಜಮೀನನ್ನು ಎರಡು ವರ್ಷದೊಳಗಾಗಿ ಉಪಯೋಗಿಸಿಕೊಳ್ಳತಕ್ಕದ್ದು ಮತ್ತು ಈ ಬಗ್ಗೆ ತಹಶೀಲ್ದಾರ್‌ರವರ ಮೂಲಕ ಈ ಕಛೇರಿಗೆ ಲಿಖಿತವಾಗಿ ಮಾಹಿತಿ ನೀಡತಕ್ಕದ್ದು.
2. ವಿನಾಯ್ತಿ ಪಡೆದವರು ಸರ್ಕಾರ ಅಥವಾ ಯಾವುದೇ ಷೆಡ್ಯೂಲ್ ಬ್ಯಾಂಕ್ ಅಥವಾ ಸಹಕಾರಿ ಕೃಷಿ ಮತ್ತು ಗ್ರಾಮೀಣಾಭಿವೃದ್ಧಿ ಬ್ಯಾಂಕ್ ಒಂದಕ್ಕೆ ಅಥವಾ ಕಂಪನಿ ಕಾಯಿದೆ 1995 ಕಲಂ 3ರಲ್ಲಿ ಹೇಳಿರುವಂತೆ, ಶೇ.55 ಪೆಯಿಡ್ ಆಫ್ ಷೇರು ಬಂಡವಾಳ ಹೊಂದಿರುವ ಕೇಂದ್ರ ಸರ್ಕಾರ ಅಥವಾ ರಾಜ್ಯ ಸರ್ಕಾರದ ಸಂಘ ಸಂಸ್ಥೆ ಒಂದಕ್ಕೆ ಖಾತರಿ ನೀಡಿ ಅಡಮಾನ ಹಾಗೂ ಇತರೆ ಹೊಣೆಮಾಡಿ ಸಾಲ ಪಡೆಯುವುದನ್ನು ಹೊರತು ಪಡಿಸಿ ಸದರಿ ಜಮೀನನ್ನು ಬೇರೆ ರೀತಿ ವರ್ಗಾಯಿಸಬಾರದು.
3. ಸದರಿ ಜಮೀನು ಸಿ.ಡಿ.ಪಿ. ಪ್ರಕಾರ ಹಸಿರು ಪಟ್ಟಿ ವಲಯದಲ್ಲಿ ಬರುತ್ತಿದ್ದು, ಹಸಿರು ವಲಯದಲ್ಲಿ ನಿಯಮಾನುಸಾರ ಉಪಯೋಗಿಸಲು ಅವಕಾಶವಿರುವ ಉದ್ದೇಶಗಳಿಗೆ ಮಾತ್ರ ಉಪಯೋಗಿಸಿಕೊಳ್ಳಬೇಕು.
4. ಈ ಜಮೀನನ್ನು ವ್ಯವಸಾಯದಿಂದ ವ್ಯವಸಾಯೇತರ ಉದ್ದೇಶಕ್ಕಾಗಿ ಪರಿವರ್ತಿಸಿಕೊಳ್ಳಲು ಭೂ ಕಂದಾಯ ಕಾಯಿದೆ 1964ರ ಕಲಂ 95ರಂತೆ ಜಿಲ್ಲಾಧಿಕಾರಿಗಳಿಂದ ಅನುಮತಿ ಪಡೆಯತಕ್ಕದ್ದು.
5. ಈ ಜಮೀನು ನಗರಾಭಿವೃದ್ಧಿ ಪ್ರಾಧಿಕಾರ ಸಿಡಿಪಿ, ಒಡಿಪಿ ಹಾಗೂ ಹಸಿರು ವಲಯ ವ್ಯಾಪ್ತಿಯೊಳಗೆ ಬಂದರೆ ಅದರಂತೆ ಅನುಮತಿ ಪಡೆದು ಉಪಯೋಗಿಸಿಕೊಳ್ಳತಕ್ಕದ್ದು.
6. ಕೈಗಾರಿಕಾ ಉದ್ದೇಶಕ್ಕೆ 10 ಯೂನಿಟ್‌ಗಳಿಗಿಂತ ಹೆಚ್ಚು ಜಮೀನನ್ನು ಹೊಂದಲು ಜಿಲ್ಲಾಧಿಕಾರಿಗಳಿಂದ ಅನುಮತಿ ಪಡೆದಿದ್ದಲ್ಲಿ, ಅಂತಹ ಅನುಮತಿಯು ತನಗೆ ತಾನೇ ರದ್ದುಗೊಳ್ಳುತ್ತದೆ.
7. ಈ ಅನುಮತಿ ಭೂ ಸುಧಾರಣೆ ಕಾಯಿದೆ 1961ರ ಕಲಂ 109 ರನ್ವಯ ಮಾತ್ರ ಮಾಡಿರುತ್ತದೆ. ಬೇರೆ ಕಾನೂನುಗಳಿಗೆ ಉಲ್ಲಂಘನೆಯಾದಲ್ಲಿ ಸಂಬಂಧಿಸಿದ ಕಾಯ್ದೆಯಡಿ ಅಗತ್ಯ ಕ್ರಮ ಜರುಗಿಸಲು ಅವಕಾಶವಿರುತ್ತದೆ.
8. ಮೇಲಿನ ಷರತ್ತುಗಳು ಉಲ್ಲಂಘನೆಯಾದಲ್ಲಿ ಈಗ ನೀಡಲಾದ ಅನುಮತಿಯನ್ನು ರದ್ದುಪಡಿಸಲಾಗುವುದು ಮತ್ತು ಪ್ರಸ್ತಾಪಿತ ಭೂಮಿಯನ್ನು ಋಣ ಮುಕ್ತವಾಗಿ ಸರ್ಕಾರದಲ್ಲಿ ನಿಹಿತಗೊಳ್ಳುವುದು.

ವಿಶೇಷ ಜಿಲ್ಲಾಧಿಕಾರಿಗಳು,
ಬೆಂಗಳೂರು ಜಿಲ್ಲೆ, ಬೆಂಗಳೂರು.

ಪಿ.ಆರ್.913

**REVENUE DEPARTMENT**
**OFFICE OF THE COMMISSIONER, SURVEY, SETTLEMENT AND LAND RECORDS IN KARNATAKA, BANGALORE**
**NOTIFICATION**
**No. TNL/ CTS(BGM)/6/ 2005-06, Dated: 24th April, 2006**
**CORRIGENDUM**

In the Notification No. TNL/ CTS (BGM)/6/2005-06, Dated: 02.03.2006 the following corrections are affected. The entries in the Col. No.3 as shown below shall substitute the corresponding entries in the Column No.7 of the said notification. In addition to the Survey numbers already notified in the said notification the following entries as mentioned in the column Nos. 4, 5 and 6 shall be included.

**G.V. RAMACHANDRA**
Commissioner,
Survey, Settlement and Land Records, Bangalore.

**SCHEDULE**
**Statement showing the details of the corrections to be made**

| Corrections to be affected | | | New additions | | |
|---|---|---|---|---|---|
| S.No. | H.No. | Area A-G | S.No. | H.No. | Area A-G |
| 1 | 2 | 3 | 4 | 5 | 6 |
| 11 | - | 00-07-00 | - | - | - |

| 1 | 2 | 3 | 4 | 5 | 6 |
|---|---|---|---|---|---|
| 17 | - | 01-35-00 | - | - | - |
| 29 | - | 02-01-00 | - | - | - |
| 30 | - | 02-17-00 | - | - | - |
| 31 | - | 02-02-00 | - | - | - |
| 32 | - | 05-00-00 | - | - | - |
| 33 | 1+2a | 01-22-00 | - | - | - |
| 33 | 1+2b | 02-35-00 | 33 | 3 | 05-06-00 |
| 34 | - | 01-12-00 | - | - | - |
| 35 | - | 04-02-00 | - | - | - |
| 36 | - | 00-36-00 | - | - | - |
| 37 | - | 05-07-00 | - | - | - |
| 38 | - | 01-26-00 | - | - | - |
| 39 | - | 01-16-00 | - | - | - |
| 40 | - | 00-21-00 | - | - | - |
| 41 | - | 05-04-00 | - | - | - |
| 42 | 1 | 03-00-00 | - | - | - |
| 42 | 2 | 04-06-00 | - | - | - |
| 43 | 1 | 02-03-00 | - | - | - |
| - | 2 | 01-02-00 | - | - | - |
| 44 | - | 01-14-00 | - | - | - |
| 45 | 1a | 01-29-00 | - | - | - |
| - | 1b | 00-20-00 | - | - | - |
| - | 1c | 00-03-00 | - | - | - |
| - | 1d | 00-12-00 | - | - | - |
| 49 | - | Deleted | - | - | - |
| 50 | - | Deleted | - | - | - |
| 51 | - | Deleted | - | - | - |
| 51a | - | Deleted | - | - | - |
| 52b | - | Deleted | - | - | - |
| 53 | - | Deleted | - | - | - |
| 54 | - | Deleted | - | - | - |
| 60 | 1 | Deleted | - | - | - |
| | 2 | Deleted | - | - | - |
| | 3 | Deleted | - | - | - |
| | 4 | Deleted | - | - | - |
| | 5 | Deleted | - | - | - |
| | 6 | Deleted | - | - | - |
| | 7 | Deleted | - | - | - |
| 61 | - | Deleted | - | - | - |
| 62 | - | Deleted | - | - | - |
| 63a | - | Deleted | - | - | - |
| 63b | - | Deleted | - | - | - |
| 64 | - | Deleted | - | - | - |
| 65 | - | Deleted | - | - | - |
| 66 | - | Deleted | - | - | - |
| 67 | - | Deleted | - | - | - |
| 68 | 1 | Deleted | - | - | - |
| | 2 | Deleted | - | - | - |
| | 3 | Deleted | - | - | - |
| | 4 | Deleted | - | - | - |
| | 5 | Deleted | - | - | - |
| | 6 | Deleted | - | - | - |

| 1 | 2 | 3 | 4 | 5 | 6 |
|---|---|---|---|---|---|
| | 7 | Deleted | - | - | - |
| | 8 | Deleted | - | - | - |
| | 9 | Deleted | - | - | - |
| | 10 | Deleted | - | - | - |
| | 11 | Deleted | - | - | - |
| | 12 | Deleted | - | - | - |
| | 13 | Deleted | - | - | - |
| | 14 | Deleted | - | - | - |
| | 15 | Deleted | - | - | - |
| | 16 | Deleted | - | - | - |
| | 17 | Deleted | - | - | - |
| | 18 | Deleted | - | - | - |
| | 19 | Deleted | - | - | - |
| | 20 | Deleted | - | - | - |
| | 21 | Deleted | - | - | - |
| | 22 | Deleted | - | - | - |
| | 23 | Deleted | - | - | - |
| | 24 | Deleted | - | - | - |
| | 25 | Deleted | - | - | - |
| | 26 | Deleted | - | - | - |
| | 27 | Deleted | - | - | - |
| | 28 | Deleted | - | - | - |
| | 29 | Deleted | - | - | - |
| | 30 | Deleted | - | - | - |
| | 31 | Deleted | - | - | - |
| | 32 | Deleted | - | - | - |
| | 33 | Deleted | - | - | - |
| | 35 | Deleted | - | - | - |
| 69 | - | Deleted | - | - | - |
| 70 | 1 | 00-12-00 | - | - | - |
| - | 4a | 00-18-00 | 70 | 4d | 00-16-00 |
| 93 | 1 | Deleted | - | - | - |
| | 2 | Deleted | - | - | - |
| | 3 | Deleted | - | - | - |
| | 4 | Deleted | - | - | - |
| | 5 | Deleted | - | - | - |
| | 6 | Deleted | - | - | - |
| | 7 | Deleted | - | - | - |
| | 8 | Deleted | - | - | - |
| | 9 | Deleted | - | - | - |
| | 10 | Deleted | - | - | - |
| | 11 | Deleted | - | - | - |
| | 12 | Deleted | - | - | - |
| | 13 | Deleted | - | - | - |
| | 14 | Deleted | - | - | - |
| | 15 | Deleted | - | - | - |
| | 16 | Deleted | - | - | - |
| | 17 | Deleted | - | - | - |
| | 18 | Deleted | - | - | - |
| | 19 | Deleted | - | - | - |
| | 20 | Deleted | - | - | - |
| | 21 | Deleted | - | - | - |
| | 22 | Deleted | - | - | - |

**G.V. RAMACHANDRA**
Commissioner,
Survey, Settlement and Land Records, Bangalore.

PR-915

**ಸಹಾಯಕ ಕಾರ್ಮಿಕ ಆಯುಕ್ತರು ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು, ವಿಭಾಗ-3, ಕಾರ್ಮಿಕ ಭವನ, ಬನ್ನೇರುಘಟ್ಟ ರಸ್ತೆ, ಬೆಂಗಳೂರು-560029**

**ಸಂಖ್ಯೆ: ಡಬ್ಲ್ಯೂಸಿಎ/ ಎಫ್‌ಸಿ/ ಸಿಆರ್-17/ 2006, ದಿನಾಂಕ:26ನೇ ಮೇ, 2006**

| **ಅರ್ಜಿದಾರರು:** | **ಪ್ರತಿವಾದಿಗಳು:** |
|---|---|
| ಶ್ರೀ ಭೂತನಾಥ್ ಮಹತೊ, ನಂ.168, ಗಂಗಜೋತಿ, ಜಾರಿಧಿ ಅಂಚಿ, ಜೈನ್‌ಮೋರ್ ಜಿಲ್ಲೆ-82930/ ಜೊಕಾರೊ ಸ್ಟೀಲ್ ಸಿಟಿ, ಜಾರ್ಖಂಡ್ ರಾಜ್ಯ. | ಮೆ: ಪೂರ್ವಂಕರ ಪ್ರಾಜೆಕ್ಟ್ ಲಿ., ನಂ.130/ 1, ಅಲಸೂರು, ಬೆಂಗಳೂರು-42. |

ಶ್ರೀ ಭೂತನಾಥ್ ಮಹತೊ (2) ಅಲಾದೇವಿ ಇವರುಗಳು ತಾವು ಮೃತ ಮೃತ್ಯುಂಜಯ ಕುಮಾರ್ ಅವರ ತಂದೆ ತಾಯಿಗಳೆಂದು, ಅವರ ಸಾವಿಗಾಗಿ ನಷ್ಟ ಪರಿಹಾರ ಪಡೆಯಲು ಕೋರಿದ್ದಾರೆ. ಈ ಸಂಬಂಧ ಪ್ರತಿವಾದಿಗಳಿಂದ ಮೆ: ಪೂರ್ವಂಕರ ಪ್ರಾಜೆಕ್ಟ್ ಲಿ, ಬೆಂಗಳೂರು ರವರು ನಷ್ಟ ಪರಿಹಾರದ ಮೊತ್ತವನ್ನೂ ಈ ಕಛೇರಿ ಸಮಕ್ಷಮದಲ್ಲಿ ವಿತರಿಸಲು ಇಚ್ಛಿಸಿರುತ್ತಾರೆ.

ಆದ್ದರಿಂದ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ ಈ ಬಗ್ಗೆ ತಮ್ಮ ಆಕ್ಷೇಪಣೆಗಳೇನಾದರೂ ಇದ್ದರೆ ಹಾಗೂ ಅರ್ಜಿದಾರರಲ್ಲದೆ ತಾವೇನಾದರೂ ಮೃತರ ನಿಜವಾದ ಅವಲಂಬಿತರು ಎಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ ಅಂತಹವರು ಈ ಪ್ರಕಟಣೆ ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟವಾದ 30 (ಮೂವತ್ತು) ದಿವಸಗಳೊಳಗಾಗಿ ತಮ್ಮ ಆಕ್ಷೇಪಣೆ ಅಥವಾ ಅರ್ಜಿಗಳನ್ನು ಈ ನ್ಯಾಯಾಲಯಕ್ಕೆ ಸಲ್ಲಿಸಬೇಕು. ನಿಗದಿಪಡಿಸಿದ ಅವಧಿಯಲ್ಲಿ ಯಾರಿಂದಲೂ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಗಳಾಗಲೀ ಬಾರದೇ ಇದ್ದಲ್ಲಿ ಮೇಲ್ಕಂಡ ಅರ್ಜಿದಾರರ ಕ್ಲೈಮ್ ಅರ್ಜಿಯ ಬಗ್ಗೆ ಮುಂದಿನ ಕ್ರಮ ಜರುಗಿಸಲಾಗುವುದು. ತದನಂತರ ಬಂದ ಆಕ್ಷೇಪಣೆ ಅಥವಾ ಅರ್ಜಿಗಳನ್ನು ಸ್ವೀಕರಿಸುವುದಿಲ್ಲ.

**ಎಸ್.ಎಸ್. ಷರೀಫ್**
ಸಹಾಯಕ ಕಾರ್ಮಿಕ ಆಯುಕ್ತರು ಹಾಗೂ
ಕಾರ್ಮಿಕ ಪರಿಹಾರ ಆಯುಕ್ತರು,
ವಿಭಾಗ-3, ಬೆಂಗಳೂರು.

ಪಿ.ಆರ್.916

**ಅಧಿಕೃತ ಅಧಿಕಾರಿ ಹಾಗೂ ಅಬಕಾರಿ ಅಧೀಕ್ಷಕರು, ಇಐಬಿ ಕೊಡಗು ಜಿಲ್ಲೆ, ಮಡಿಕೇರಿ, ಇವರ ನಡವಳಿಗಳು**

**ನಂ. ಇಎಕ್ಸ್‌ಇ:ಡಿಟಿಸಿಆರ್‌ಎಂ:35/ 2005-06, ದಿನಾಂಕ:22ನೇ ಮೇ, 2006**

**ಉಪಸ್ಥಿತರು:** ಎನ್.ಎಂ. ಹುಸೇನ್,
ಅಧಿಕೃತ ಅಧಿಕಾರಿ ಹಾಗೂ ಅಬಕಾರಿ ಅಧೀಕ್ಷಕರು ವಿಚಕ್ಷಣದಳ (ಇಐಬಿ), ಕೊಡಗು ಜಿಲ್ಲೆ, ಮಡಿಕೇರಿ.

| **ಅರ್ಜಿದಾರರು:** | | **ಆರೋಪಿಗಳು** |
|---|---|---|
| ಆರಕ್ಷ ಉಪ ನಿರೀಕ್ಷಕರು, ಗ್ರಾಮಾಂತರ ಠಾಣೆ, ಮಡಿಕೇರಿ. | **ವಿರುದ್ಧ** | 1) ಶಾಜಿ ಎಂ. ತಂದೆ ಲೇಟ್ ಶ್ರೀಧರನ್, ನಲಾಂಪರಾತ್ ಮನೆ, ಕೀರಿಯಾಡ್, ವಳಪಟ್ಟಣಂ, ಕಣ್ಣೂರು ಜಿಲ್ಲೆ.<br>2) ಕೆ.ವಿ. ರಷೀದ್ ತಂದೆ ಪೌತಿ ಮೂಸ, ವಾಸ: ಬೆಲಿಯನ್ನೂರು, ಸೆರಾಂಬಿ ಮಸೀದಿ ಹತ್ತಿರ ಕಣ್ಣೂರು. |

**ಪ್ರಕರಣದ ಮುಖ್ಯಾಂಶಗಳು:**

ದಿನಾಂಕ: 07.08.2005 ರಂದು ಮಡಿಕೇರಿ ಗ್ರಾಮಾಂತರ ಆರಕ್ಷಕ ಉಪ ನಿರೀಕ್ಷಕರು ಕರ್ತವ್ಯದ ಮೇಲೆ ಮಡಿಕೇರಿ ತಾಲ್ಲೂಕಿನ ಸರಹದ್ದಿಗೆ ಬರುವ ಸಂಪಾಜೆ ಉಪ ಠಾಣೆಗೆ ಭೇಟಿ ನೀಡಿ ಸಂಪಾಜೆಯ ಪಾರೆಸ್ಟ್ ಚೆಕ್ ಪೋಸ್ಟ್ ಹತ್ತಿರ ವಾಹನ ತಪಾಸಣೆ ಮಾಡುತ್ತಿರುವ ಸಮಯ ಮಧ್ಯಾಹ್ನ 3.00 ಗಂಟೆಯ ಹೊತ್ತಿಗೆ ಮಂಗಳೂರು ಕಡೆಯಿಂದ ಒಂದು ಕೆಎಲ್-10-ಬಿ-740 ನಂಬರಿನ 407 ಮಿನಿ ಲಾರಿ ವಾಹನವು ಬರುವುದನ್ನು ಕಂಡು ಅದನ್ನು ನಿಲ್ಲಿಸುವಂತೆ ಚಾಲಕನಿಗೆ ಸೂಚನೆ ನೀಡಿದಾಗ ಚಾಲಕನು ರಸ್ತೆಯ ಬದಿಯಲ್ಲಿ ವಾಹನವನ್ನು ನಿಲ್ಲಿಸಿದನು. ಸದರಿಯವನಲ್ಲಿ ವಾಹನದ ದಾಖಲಾತಿಗಳನ್ನು ಹಾಜರು ಪಡಿಸುವಂತೆ ಸೂಚನೆ ನೀಡಿದಾಗ ಚಾಲಕನು ದಾಖಲಾತಿಗಳೊಂದಿಗೆ ವಾಹನದಿಂದ ಇಳಿದು ಬರುತ್ತಿರುವಾಗ ಜೊತೆಯಲ್ಲಿದ್ದ ಪೊಲೀಸ್ ಬ್ಬಂದಿಯವರು ವಾಹನವನ್ನು ಪರಿಶೀಲಿಸುವ ಬಗ್ಗೆ ವಾಹನದ ಹತ್ತಿರ ಹೋಗುವುದನ್ನು ಕಂಡು ವಾಹನದಲ್ಲಿದ್ದ ಒಬ್ಬ ವ್ಯಕ್ತಿಯು ವಾಹನದಿಂದ ಇಳಿದು ವಾಹನದ ಹಿಂದುಗಡೆ ಹೋಗುತ್ತಾ ಸ್ವಲ್ಪ ದೂರ ನಡೆದು ನಂತರ ಓಡಿದನು. ಇದನ್ನು ಕಂಡು ಆರಕ್ಷಕ ಸಿಬ್ಬಂದಿಯವರು ವಾಹನದಲ್ಲಿದ್ದ ಮತ್ತೊಬ್ಬ ವ್ಯಕ್ತಿ ಮತ್ತು ಚಾಲಕನನ್ನು ಹಿಡಿದುಕೊಂಡು ವಾಹನದ ಒಳಭಾಗವನ್ನು ಪರಿಶೀಲಿಸಿದಾಗ ಯಾವುದೇ ವಸ್ತು ಇರುವುದು ಕಂಡುಬರಲಿಲ್ಲ. ಇದನ್ನು ಕಂಡು ಸಂಪಾಜೆ ಅರಣ್ಯ ತಪಾಸಣಾ ಗೇಟಿನ ಬಳಿ ಕರ್ತವ್ಯದಲ್ಲಿದ್ದ ಮಡಿಕೇರಿ ತಾಲ್ಲೂಕು ಜಾರಿ ಮತ್ತು ತನಿಖಾ ವಿಭಾಗದ ಅಬಕಾರಿ ಉಪ ನಿರೀಕ್ಷಕರಾದ ಕೆ. ಶ್ರೀನಿವಾಸ್, ಅಬಕಾರಿ ರಕ್ಷಕರಾದ ಎ.ಪಿ. ನಾಗರಾಜು ಮತ್ತು ಸಂಪಾಜೆಯಲ್ಲಿ ವಾಸ ಇರುವ ಭುವನೇಶ್ವರ್ ಎಂಬುವರು ಜೊತೆಗೂಡಿ ಲಾರಿಯಲ್ಲಿದ್ದ ಇಬ್ಬರು ವ್ಯಕ್ತಿಗಳನ್ನು ಹಿಡಿದುಕೊಂಡು ಕೂಲಂಕುಷವಾಗಿ ವಿಚಾರಣೆಗೆ ಒಳಪಡಿಸಿದಾಗ ಸದರಿ ವಾಹನದ ಕ್ಯಾಬಿನ್ ಮೇಲ್ಭಾಗದಲ್ಲಿ ಮತ್ತು ಬಾಡಿಯಲ್ಲಿ ಸ್ಪಿರೀಟ್ ತುಂಬಿದ ಕ್ಯಾನ್‌ಗಳನ್ನು ಜೋಡಿಸಿ ಇಟ್ಟಿರುವುದಾಗಿ ಮತ್ತು ಅದರ ಮೇಲೆ ಹಲಗೆಯಿಂದ ಭದ್ರಪಡಿಸಲಾಗಿದೆ ಎಂಬುವುದಾಗಿ ತಿಳಿಸಿದರು. ಅದರಂತೆ ಸದರಿ ಲಾರಿಯ ಕ್ಯಾಬಿನ್‌ನ್ನು ಪರಿಶೀಲಿಸಿದಾಗ 35 ಲೀ.ನ 30 ಬಿಳಿ ಪ್ಲಾಸ್ಟಿಕ್ ಕ್ಯಾನ್‌ಗಳು ಮತ್ತು 20 ಲೀ ನ 4 ಬಿಳಿ ಪ್ಲಾಸ್ಟಿಕ್ ಕ್ಯಾನ್‌ಗಳಲ್ಲಿ ಇದ್ದು ಒಟ್ಟು 1,130 ಲೀ. ಮದ್ಯಸಾರವಿರುವುದು ಪತ್ತೆಯಾಗಿರುತ್ತದೆ.

ಸದರಿ ವಾಹನದಲ್ಲಿದ್ದ ಇಬ್ಬರು ಆಸಾಮಿಗಳನ್ನು ಹೆಸರು ವಿಳಾಸ ಕೇಳಲಾಗಿ ಚಾಲಕನ ಹೆಸರು ಎಂ. ಶಾಜಿ ತಂದೆ ಪೌತಿ ಶ್ರೀಧರನ್ ನಾಲಾಂಪರತ್ ಹೌಸ್, ಕೀರಿಯಾಡ್, ವಳಪಟ್ಟಣಂ ಕಣ್ಣೂರು ಜಿಲ್ಲೆ, (2) ಮೀತಲ್ ಪುರಯಿಲ್ ಕೆ.ವಿ. ರಷೀದ್ ತಂದೆ ಪೌತಿ ಮೂಸ, ವಾಸ ಬೆಲಿಯನ್ನೂರು, ಸೆರಾಂಬಿ ಮಸೀದಿ ಹತ್ತಿರ, ಕಣ್ಣೂರು ಜಿಲ್ಲೆ ಎಂದು ತಿಳಿಸಿರುತ್ತಾರೆ. ಸದರಿ ಮದ್ಯಸಾರವನ್ನು ಸಾಗಿಸಲು ಸರ್ಕಾರದ ರಹದಾರಿಯನ್ನು

ಕೇಳಲಾಗಿ ಇಲ್ಲವೆಂದು ತಿಳಿಸಿರುತ್ತಾರೆ. ಆದುದರಿಂದ ಸದರಿ ಮದ್ಯಸಾರ ಸಾಗಾಣಿಕೆಯನ್ನು ಅಕ್ರಮ ಸಾಗಾಣಿಕೆ ಎಂದು ಪರಿಗಣಿಸಿ ಕರ್ನಾಟಕ ರಾಜ್ಯ ಅಬಕಾರಿ ಕಾಯಿದೆ ಕಲಂ 11, 14, 32, 34, 38ಎ, 43(ಎ) ರ ಪ್ರಕಾರ ಶಿಕ್ಷಾರ್ಹ ಅಪರಾಧವಾದ್ದರಿಂದ ಆರಕ್ಷಕ ಉಪ ನಿರೀಕ್ಷಕರು ವಾಹನ ಲಾರಿ ಸಂಖ್ಯೆ: ಕೆಎಲ್-10-ಬಿ-740 ನಂಬರಿನ 407 ಮಿನಿ ಲಾರಿಯನ್ನು ಮದ್ಯಸಾರ ಸಮೇತ ವಶಪಡಿಸಿಕೊಂಡು ಮಹಜರ್ ಜರುಗಿಸಿ ಆರಕ್ಷಕ ಉಪ ನಿರೀಕ್ಷಕರು, ಮಡಿಕೇರಿ ಗ್ರಾಮಾಂತರ ಠಾಣೆ ಇವರ ಮೊಕದ್ದಮೆ ಸಂಖ್ಯೆ 106/ 2005 ದಿನಾಂಕ: 07.08.2005ರಂತೆ ಮೊಕದ್ದಮೆಯನ್ನು ದಾಖಲು ಮಾಡಿ ಈ ಪ್ರಾಧಿಕಾರದ ಆದೇಶದಂತೆ ಮುಂದಿನ ತನಿಖೆಯ ಬಗ್ಗೆ ಅಬಕಾರಿ ಉಪ ನಿರೀಕ್ಷಕರು, ಜಾರಿ ಮತ್ತು ತನಿಖೆ, ಮಡಿಕೇರಿ ಇವರಿಗೆ ಹಸ್ತಾಂತರಿಸಿರುತ್ತಾರೆ.

ಅಬಕಾರಿ ಉಪ ನಿರೀಕ್ಷಕರು, ಜಾರಿ ಮತ್ತು ತನಿಖೆ ಮಡಿಕೇರಿ ಇವರು ತನಿಖೆಯನ್ನು ಪ್ರಾರಂಭಿಸಿ ಸದರಿ ಪ್ರಕರಣವನ್ನು ಹಸ್ತಾಂತರ ಪಡೆಯುವ ಸಮಯದಲ್ಲಿ, ಪ್ರತಿಯೊಂದು ಕ್ಯಾನುಗಳಿಂದ ಮಾದರಿ ತೆಗೆದಿದ್ದ ಮದ್ಯಸಾರವನ್ನು ಸಹಾಯಕ ರಾಸಾಯನಿಕ ಪರಿವೀಕ್ಷಕರು ಕೇಂದ್ರ ರಾಸಾಯನ ಪ್ರಯೋಗಾಲಯ ಬೆಂಗಳೂರು ಇವರಿಗೆ ದಿನಾಂಕ: 21.09.2005ರಂದು ಕಳುಹಿಸಲಾಗಿದ್ದು ಅವರ ವರದಿ ಸಂಖ್ಯೆ: ಸಿಸಿಎಲ್ 5372/ 2005 ದಿನಾಂಕ: 23.09.2005 ರಲ್ಲಿ ಸದರಿ ಮದ್ಯ ಸಾರವು 62.2 ಒಪಿ ಮತ್ತು 66.5 ಒಪಿ ಸಾಂದ್ರತೆ ಇರುವುದಾಗಿ ಮತ್ತು ಮಾನವನ ಸೇವನೆಗೆ ಯೋಗ್ಯ ಇರುವುದಾಗಿ ದೃಢೀಕರಣ ಪತ್ರ ನೀಡಿರುತ್ತಾರೆ.

ಸದರಿ ಮದ್ಯಸಾರ ಹಾಗೂ ವಾಹನ ವಶಪಡಿಸಿಕೊಂಡು ಇಂದಿನವರೆಗೆ ಸಂಬಂಧಪಟ್ಟವರಾಗಲೀ ವಾಹನದಲ್ಲಿದ್ದ ಇಬ್ಬರು ಆಸಾಮಿಗಳಾಗಲೀ ಈ ಪ್ರಾಧಿಕಾರಕ್ಕಾಗಲೀ ಅಥವಾ ಅಬಕಾರಿ ಉಪ ನಿರೀಕ್ಷಕರು, ಜಾರಿ ಮತ್ತು ತನಿಖೆ, ಮಡಿಕೇರಿ ಇವರ ಕಛೇರಿಯಲ್ಲಿ ಹಾಜರಾಗಿ ಅರ್ಜಿ ಸಲ್ಲಿಸಿರುವುದಿಲ್ಲ. ಆದುದರಿಂದ ವಾಹನದ ಮಾಲೀಕರನ್ನು ಪತ್ತೆ ಹಚ್ಚಲು ದಿನಾಂಕ: 01.10.2005 ಹಾಗೂ 31.10.2005 ರಂದು ಪ್ರಾದೇಶಿಕ ಸಾರಿಗೆ ಅಧಿಕಾರಿಗಳು, ಮಲ್ಲಪುರಂ ಜಿಲ್ಲೆ, ಕೇರಳ ರಾಜ್ಯ ಇವರಿಗೆ ಪತ್ರ ಬರೆದು ವಾಹನದ ಮಾಲೀಕತ್ವಕ್ಕೆ ಸಂಬಂಧಪಟ್ಟ 'ಬಿ' ಎಕ್ಸ್ಟ್ರಾಕ್ಟ್ ಕಳುಹಿಸಿಕೊಡುವಂತೆ ಅಬಕಾರಿ ಉಪ ನಿರೀಕ್ಷರು, ಸಂ:1, ಮಡಿಕೇರಿ ಇವರು ಪತ್ರ ಬರೆದು ಕೋರಲಾಗಿರುತ್ತದೆ. ಸದರಿ ಪತ್ರಕ್ಕೆ ಉತ್ತರವಾಗಿ ಮಲ್ಲಪುರಂ ಪ್ರಾದೇಶಿಕ ಸಾರಿಗೆ ಅಧಿಕಾರಿಗಳು ದಿನಾಂಕ: 13.12.2005ರಂದು 'ಬಿ' ಎಕ್ಸ್ಟ್ರಾಕ್ಟ್ ನೀಡಿದ್ದು ಅದರಲ್ಲಿ ನಮೂದಿಸಿದಂತೆ ಶ್ರೀ ಪಿ. ಮಹಮದ್, ತಂದೆ ಚಿಕ್ಕುನಿ ಹಾಜಿ, ಕುಮೋಲಿ ಹೌಸ್, ಮರೆಯೂರು ಅಂಚೆ, ಮಲ್ಲಪುರಂ ಎಂದು ತಿಳಿಸಿದ್ದು ಹಾಗೂ ತಲಚೇರಿ ಪ್ರಾದೇಶಿಕ ಸಾರಿಗೆ ಅಧಿಕಾರಿಗಳಿಗೆ ಸಿ.ಸಿ. ನೀಡಿರುವುದಾಗಿ ವರದಿ ಸಲ್ಲಿಸಿರುತ್ತಾರೆ.

ಅದರಂತೆ ಪ್ರಾದೇಶಿಕ ಸಾರಿಗೆ ಅಧಿಕಾರಿಗಳು, ತಲಚೇರಿ ರವರಿಗೆ ದಿನಾಂಕ: 05.04.2006ರಂದು ನೋಂದಣಿ ಅಂಚೆಯ ಮೂಲಕ ಪತ್ರ ಬರೆದು ಈಗಿನ ವಾರಸುದಾರರ ವಿವರ ಕಳುಹಿಸಿಕೊಡುವಂತೆ ಕೋರಲಾಗಿ ಇಂದಿನವರೆಗೆ ಅವರಿಂದ ಯಾವುದೇ ಉತ್ತರ ಬಂದಿರುವುದಿಲ್ಲ. ಅವರಿಗೆ ಪತ್ರ ತಲುಪಿದ ಬಗ್ಗೆ ಸ್ವೀಕೃತಿ ಪತ್ರ ಸಹಾ ಬಂದಿರುತ್ತದೆ. ಮತ್ತು 'ಬಿ' ಎಕ್ಸ್ಟ್ರಾಕ್ಟ್ ನಲ್ಲಿದ್ದಂತೆ ಶ್ರೀ ಪಿ. ಮಹಮದ್ ರವರಿಗೂ ಕರ್ನಾಟಕ ರಾಜ್ಯ ಅಬಕಾರಿ ಕಾಯ್ದೆ 1965ರ ಕಲಂ 43ಬಿ ರ ಪ್ರಕಾರ ಇದೇ ದಿನಾಂಕದಂದು ಕಾರಣ ಕೇಳಿ ನೋಟೀಸ್ ನೋಂದಣಿ ಅಂಚೆಯ ಮೂಲಕ ನೀಡಲಾಗಿದ್ದು, ಸದರಿ ವಿಳಾಸದಾರರು ಇಲ್ಲವೆಂದು ಪತ್ರವು ಹಿಂದಿರುಗಿ ಬಂದಿರುತ್ತದೆ.

ವಾಹನವನ್ನು ವಶಪಡಿಸಿಕೊಂಡು ಇಂದಿಗೆ ಎಂಟು ತಿಂಗಳು ಕಳೆದರೂ ಸಂಬಂಧಪಟ್ಟವರಾಗಲೀ ಅಥವಾ ಅವರ ಪರ ವಕೀಲರಾಗಲೀ ಈ ಪ್ರಾಧಿಕಾರಕ್ಕೆ ಹಾಜರಾಗಿ ಸೂಕ್ತ ದಾಖಲಾತಿಗಳೊಂದಿಗೆ ಅರ್ಜಿ ಸಲ್ಲಿಸಿರುವುದಿಲ್ಲ. ಆದುದರಿಂದ ವಾಹನದ ಮಾಲೀಕರು ಅಬಕಾರಿ ಕಾನೂನಿನ ಅರಿವಿದ್ದೇ ಈ ಅಪರಾಧದಲ್ಲಿ ಭಾಗಿಯಾಗಿರುವುದು ಮೇಲ್ನೋಟಕ್ಕೆ ಸಾಭೀತಾಗಿರುತ್ತದೆ.

ಕರ್ನಾಟಕ ಅಬಕಾರಿ ಕಾಯಿದೆ 1965ರ ಕಲಂ 43 ರಡಿಯಲ್ಲಿ ಪ್ರಕರಣವನ್ನು ದಾಖಲು ಮಾಡಿದ್ದು ಆರೋಪಿಗಳು ಪತ್ತೆಯಾಗದಿದ್ದಲ್ಲಿ ಅಥವಾ ಪತ್ತೆಯಾಗುವ ಸಾಧ್ಯತೆಗಳು ಇಲ್ಲದಿದ್ದಲ್ಲಿ ಹಾಗೂ ಜಪ್ತು ಮಾಡಲಾದ ವಾಹನವನ್ನು ಜಪ್ತುಪಡಿಸಿದ ಒಂದು ತಿಂಗಳೊಳಗೆ ಯಾವುದೇ ವ್ಯಕ್ತಿಯು ವಾಹನಕ್ಕೆ ಸಂಬಂಧಿಸಿದ ಕಾನೂನುಬದ್ಧವಾದ ದಾಖಲಾತಿಗಳೊಂದಿಗೆ ಮಾಲೀಕತ್ವವನ್ನು ಕೋರಿ ಪ್ರಾಧಿಕಾರದ ಮುಂದೆ ಬಾರದಿದ್ದಲ್ಲಿ ಮತ್ತು ಸದರಿ ಸ್ವತ್ತುಗಳು ಕರ್ನಾಟಕ ಅಬಕಾರಿ ಕಾಯಿದೆ 1965ರ ಕಲಂ 43ಸಿ ರಡಿಯಲ್ಲಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಹುದಾದಂತಹ ಸ್ವತ್ತುಗಳಾಗಿದ್ದಲ್ಲಿ ಅಕ್ರಮ ಮದ್ಯಸಾರ ಸಾಗಾಣಿಕೆಗೆ ದಿನಾಂಕ: 07.08.2005ರಂದು ದಾಖಲಾಗಿರುವ ಅಪರಾಧದಲ್ಲಿ ಬಳಸಿದ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಹುದಾದ ಅಧಿಕಾರ ಈ ಪ್ರಾಧಿಕಾರಕ್ಕೆ ದತ್ತವಾಗಿರುವುದರಿಂದ ಹಾಗೂ ವಾಹನವನ್ನು ಚಾಲನೆಯ ಸ್ಥಿತಿಯಿಲ್ಲದೆ ಹೆಚ್ಚು ಸಮಯ ಇಟ್ಟುಕೊಂಡಲ್ಲಿ ಅದರ ಬಿಡಿಭಾಗಗಳು ತೀರಾ ತುಕ್ಕುಹಿಡಿದು ಹವಾಮಾನ ವಿಪರೀತ್ಯಕ್ಕೆ ತೀರಾ ಹಾಳಾಗುವ ಸಂಭವ ಇರುವುದರಿಂದ ಹಾಗೂ ಸರ್ಕಾರದ ಆದಾಯದ ಹಿತದೃಷ್ಟಿಯಿಂದ ಸದರಿ ವಾಹನವನ್ನು ವಾರಸುದಾರರಿಲ್ಲದ ಸೊತ್ತೆಂದು ಪರಿಗಣಿಸಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದು ಸೂಕ್ತ ಎಂದು ನಿರ್ಧರಿಸಿ ಈ ಕೆಳಕಂಡ ಆದೇಶ.

## ಆದೇಶ

ಎನ್.ಎಂ. ಹುಸೇನ್, ಅಧಿಕೃತ ಅಧಿಕಾರಿಗಳು ಹಾಗೂ ಅಬಕಾರಿ ಅಧೀಕ್ಷಕರು, ಕೊಡಗು ಜಿಲ್ಲೆ, ಮಡಿಕೇರಿ, ಆದ ನಾನು ಕರ್ನಾಟಕ ಅಬಕಾರಿ ಕಾಯಿದೆ 1965ರ ಕಲಂ 43(ಎ) ನಲ್ಲಿ ದತ್ತವಾದ ಅಧಿಕಾರವನ್ನು ಚಲಾಯಿಸಿ ನಿಯಮ 43(ಬಿ) ರನ್ವಯ ಅನುಸರಿಸಬೇಕಾದ ಕ್ರಮಗಳನ್ನು ಜರುಗಿಸಿ ಆರಕ್ಷಕ ಉಪ ನಿರೀಕ್ಷಕರು, ಗ್ರಾಮಾಂತರ ಠಾಣೆ, ಮಡಿಕೇರಿ ಇವರ ಮೊಕದ್ದಮೆ ಸಂಖ್ಯೆ: 106/ 05, ದಿನಾಂಕ: 07.08.2005 ರಂದು ವಶಪಡಿಸಿಕೊಂಡ 407 ಮಿನಿ ಲಾರಿ ಸಂಖ್ಯೆ: ಕೆ.ಎಲ್.-10-ಬಿ-740 ರನ್ನು ಕರ್ನಾಟಕ ಅಬಕಾರಿ ಕಾಯಿದೆ ಕಲಂ 43 ಸಿ ಅನ್ವಯ ವಾರಸುದಾರರಿಲ್ಲದ ಸೊತ್ತೆಂದು ಪರಿಗಣಿಸಿ ಕರ್ನಾಟಕ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶ ನೀಡಿರುತ್ತೇನೆ.

ಮುಟ್ಟುಗೋಲು ಹಾಕಿಕೊಳ್ಳಲಾಗಿರುವ ವಾಹನವನ್ನು 30 ದಿನಗಳು ಕಳೆದ ನಂತರ ಕರ್ನಾಟಕ ಅಬಕಾರಿ (ಮುಟ್ಟುಗೋಲು ಸ್ವತ್ತುಗಳ ವಿಲೇವಾರಿ) ನಿಯಮಗಳ 1967ರ ಅನುಸಾರ ಬಹಿರಂಗ ಹರಾಜು ಮೂಲಕ ವಿಲೇಗೊಳಿಸಲು ಆದೇಶಿಸಿದೆ.

ಈ ಆದೇಶ ಇಂದು ಅಂದರೆ 22.05.2006ರಂದು ಬೆರಳಚ್ಚು ಮಾಡಿ ಬೆರಳಚ್ಚು ಮಾಡಿದ ಪ್ರತಿಯನ್ನು ತಿದ್ದಿ ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು. ಈ ಆದೇಶ ಇಂದಿನಿಂದ 30 ದಿವಸಗಳ ನಂತರ ಜಾರಿಗೆ ಬರುವುದು.

ಅಧಿಕೃತ ಅಧಿಕಾರಿ ಹಾಗೂ ಅಬಕಾರಿ
ಅಧೀಕ್ಷಕರು, ಕೊಡಗು ಜಿಲ್ಲೆ, ಮಡಿಕೇರಿ.

ಪಿ.ಆರ್.918

## ನಿರ್ದೇಶನಾಲಯ, ಕರ್ನಾಟಕ ಸರ್ಕಾರಿ ವಿಮಾ ಇಲಾಖೆ, ಬೆಂಗಳೂರು-1

## ಅಧಿಸೂಚನೆ

## ಸಂಖ್ಯೆ: ವಿನಿ.ಸಿಶಾ.ಹುಕ.ವಿಲೀನ.365, 2006-07, ದಿನಾಂಕ:25ನೇ ಮೇ, 2006

**ವಿಷಯ:** ಅಪರ ಜಿಲ್ಲಾ ವಿಮಾ ಕಛೇರಿ ಹುಬ್ಬಳ್ಳಿ ಇದನ್ನು ಜಿಲ್ಲಾ ವಿಮಾ ಕಛೇರಿ, ಧಾರವಾಡ, ಇದರೊಂದಿಗೆ ವಿಲೀನಗೊಳಿಸುವ ಬಗ್ಗೆ.

**ಉಲ್ಲೇಖ:** (1) ಸರ್ಕಾರಿ ಆದೇಶ ಸಂಖ್ಯೆ: ಆಇ 119.ಕವಿಇ.2004, ದಿನಾಂಕ:26.11.2004.

(2) ಸರ್ಕಾರದ ಪತ್ರ ಸಂಖ್ಯೆ: ಆಇ 105. ಕವಿಇ. 2005, ದಿನಾಂಕ: 15.05.2006.

ಉಲ್ಲೇಖ (1)ರ ಸರ್ಕಾರಿ ಆದೇಶವನ್ನು ಅನುಷ್ಠಾನಗೊಳಿಸುವ ಉದ್ದೇಶದಿಂದ, "ಅಪರ ಜಿಲ್ಲಾ ವಿಮಾ ಕಛೇರಿ, ಹುಬ್ಬಳ್ಳಿ"ಯನ್ನು ಜಿಲ್ಲಾ ವಿಮಾ ಕಛೇರಿ, ಧಾರವಾಡ" ದೊಂದಿಗೆ ತತ್‌ಕ್ಷಣದಿಂದ ಜಾರಿಗೆ ಬರುವಂತೆ ವಿಲೀನಗೊಳಿಸಿದೆ. ತತ್ಸಂಬಂಧವಾಗಿ, ಹುಬ್ಬಳ್ಳಿ ಕಛೇರಿಯ ಈ ಕೆಳಕಾಣಿಸಿದ ಸಿಬ್ಬಂದಿಯನ್ನು ಧಾರವಾಡ ಜಿಲ್ಲಾ ವಿಮಾ ಕಛೇರಿಯೊಂದಿಗೆ ವಿಲೀನಗೊಳಿಸಲಾಗಿದೆ. ಹಾಗೂ ಜಿಲ್ಲಾ ವಿಮಾಧಿಕಾರಿಗಳ ಹುದ್ದೆಯನ್ನು ಕೇಂದ್ರ ಕಛೇರಿಗೆ ಸ್ಥಳಾಂತರಿಸಲಾಗಿದೆ.

**ಹುದ್ದೆಗಳ ಸಂಖ್ಯೆ**

| | |
|---|---|
| 1. ಅಧೀಕ್ಷಕರು | 2 |
| 2. ಪ್ರಥಮ ದರ್ಜೆ ಸಹಾಯಕರು | 3 |
| 3. ಶೀಘ್ರಲಿಪಿಗಾರರು | 1 |
| 4. ದ್ವಿತೀಯ ದರ್ಜೆ ಸಹಾಯಕರು | 4 |
| 5. ಜವಾನರು | 1 |

ನಿರ್ದೇಶಕರು,
ವಿಮಾ ಇಲಾಖೆ.

ಪಿ.ಆರ್.919

## ಜಿಲ್ಲಾಧಿಕಾರಿಗಳವರ ಕಛೇರಿ, ಬೆಂಗಳೂರು ಗ್ರಾಮಾಂತರ ಜಿಲ್ಲೆ, ಬೆಂಗಳೂರು

## ನಮೂನೆ 27

## 94ನೇ ನಿಯಮದ 68(1)ನೇ ಪ್ರಕರಣದ ಮೇರೆಗಿನ ಘೋಷಣೆ

## ನಂ.ಸಿಎಎಲ್. (ಹೊ)ಸಿಆರ್ 205/ 05-06, ಬೆಂಗಳೂರು, ದಿನಾಂಕ:24ನೇ ಮೇ, 2006

ಸರ್ಕಾರದ ಸ್ವತ್ತಾಗಿರುವ ಹಾಗೂ ಕೆಳಗಿನ ಅನುಸೂಚಿಯಲ್ಲಿ ನಿರ್ದಿಷ್ಟಪಡಿಸಿದ ಸಾರ್ವಜನಿಕ ರಸ್ತೆಯ ಭಾಗವು ಸಾರ್ವಜನಿಕರ ಉಪಯೋಗಕ್ಕೆ ಅಗತ್ಯವಿಲ್ಲವೆಂದು ರಾಜ್ಯ ಸರ್ಕಾರಕ್ಕೆ ಕಂಡುಬಂದಿರುವುದರಿಂದ,

1. ಈಗ ಕರ್ನಾಟಕ ಭೂಕಂದಾಯ ಅಧಿನಿಯಮದ 1964ರ 68ನೇ ಪ್ರಕರಣದ (1)ನೇ ಉಪ ಪ್ರಕರಣದಿಂದ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು ಸಾರ್ವಜನಿಕ ರಸ್ತೆಯ ಸದರಿ ಭಾಗವು ಸಾರ್ವಜನಿಕರ ಉಪಯೋಗಕ್ಕೆ ಅಗತ್ಯವಿಲ್ಲವೆಂದು ಮತ್ತು ಸಾರ್ವಜನಿಕ ರಸ್ತೆಯ ಸದರಿ ಭಾಗದಲ್ಲಿ ಅಥವಾ ಅದರ ಮೇಲೆ ಸಾರ್ವಜನಿಕರ ಹಾಗೂ ಎಲ್ಲಾ ವ್ಯಕ್ತಿಗಳ ಹಕ್ಕುಗಳು ಕೊನೆಗೊಳ್ಳತಕ್ಕುದೆಂದು ಉದ್ದೇಶಿಸಿ ಈ ಮೂಲಕ ಘೋಷಿಸುತ್ತದೆ.

2. ಸಾರ್ವಜನಿಕ ಹೆದ್ದಾರಿಯ ಹಕ್ಕಿನ ಜೊತೆಗೆ ಸದರಿ ರಸ್ತೆಯ ಸದರಿ ಭಾಗದಲ್ಲಿ ಅಥವಾ ಅದರ ಮೇಲೆ ಹಿತಾಸಕ್ತಿಯುಳ್ಳ ಅಥವಾ ಹಕ್ಕುಳ್ಳ ಅಥವಾ ಈ ಉದ್ದೇಶದಿಂದ ಪ್ರತಿಕೂಲ ಪರಿಣಾಮಕ್ಕೊಳಗಾಗುವ ಸಂಭವವಿರುವ ಇತರ ಯಾವುದೇ ಹಿತಾಸಕ್ತಿಯನ್ನು ಹೊಂದಿರುವ ಯಾವನೇ ಸಾರ್ವಜನಿಕನು ಅಥವಾ ಯಾವನೇ ವ್ಯಕ್ತಿಯು, ಈ ಅಧಿಸೂಚನೆಯನ್ನು ಹೊರಡಿಸಿದ ತೊಂಭತ್ತು ದಿನಗಳೊಳಗೆ ಸದರಿ ಉದ್ದೇಶದ ಬಗ್ಗೆ ತನ್ನ ಆಕ್ಷೇಪಣೆಗಳನ್ನು ಅಂತಹ ಹಿತಾಸಕ್ತಿಯ ಅಥವಾ ಹಕ್ಕಿನ ಸ್ವರೂಪವನ್ನು ಮತ್ತು ಪ್ರತಿಕೂಲ ಪರಿಣಾಮವು ಸಂಭವಿಸಿರಬಹುದಾದ ರೀತಿಯನ್ನು ಮತ್ತು ಅಂಥ ಹಿತಾಸಕ್ತಿ ಅಥವಾ ಹಕ್ಕಿನ ಬಗ್ಗೆ ನಷ್ಟ ಪರಿಹಾರಕ್ಕಾಗಿ ಕ್ಲೇಮು ಮಾಡಲಾದ ಮೊಬಲಗು ಮತ್ತು ವಿವರಗಳನ್ನು ಜಿಲ್ಲೆಯ ಡೆಪ್ಯುಟಿ ಕಮೀಷನರಿಗೆ ಬರಹದಲ್ಲಿ ತಿಳಿಸತಕ್ಕದು. ಮತ್ತು ಸದರಿ ಆಕ್ಷೇಪಣೆಗಳನ್ನು ಮತ್ತು ಕ್ಲೇಮುಗಳನ್ನು ಸದರಿ ಪ್ರಕರಣದಲ್ಲಿ ಉಪಬಂಧಿಸಿರುವಂತೆ ಡೆಪ್ಯುಟಿ ಕಮೀಷನರು ಪರಿಶೀಲಿಸತಕ್ಕದು.

ಗ್ರಾಮ: ಎತ್ತಿನವಡೇರಪುರ, ಹೋಬಳಿ: ಸೂಲಿಬೆಲೆ, ತಾಲ್ಲೂಕು: ಹೊಸಕೋಟೆ, ಜಿಲ್ಲೆ: ಬೆಂಗಳೂರು ಗ್ರಾಮಾಂತರ

**ಅನುಸೂಚಿ**

| | | | |
|---|---|---|---|
| 1. ಗ್ರಾಮ | ಎತ್ತಿನವಡೇರಪುರ | 1. ಗ್ರಾಮ | ಎತ್ತಿನವಡೇರಪುರ |
| 2. ತಾಲ್ಲೂಕು | ಹೊಸಕೋಟೆ | 2. ತಾಲ್ಲೂಕು | ಹೊಸಕೋಟೆ |
| 3. ಜಿಲ್ಲೆ | ಬೆಂಗಳೂರು ಗ್ರಾಮಾಂತರ | 3. ಜಿಲ್ಲೆ | ಬೆಂಗಳೂರು ಗ್ರಾಮಾಂತರ |
| 4. ಸ.ನಂ. | 2/ 4ಬಿ | 4. ಸ.ನಂ. | 15 ಖುಷ್ಕಿ |
| 5. ವಿಸ್ತೀರ್ಣ | 0-01 1/ 4 | 5. ವಿಸ್ತೀರ್ಣ | 0.03 3/4 |
| 6. ಆಕಾರ | ರೂ.0.50 ಪೈಸೆ | 6. ಆಕಾರ | ರೂ. 0.50 ಪೈಸೆ |

**ಚೆಕ್ಕುಬಂದಿ**

ಪೂರ್ವಕ್ಕೆ: ನಾರಾಯಸ್ವಾಮಿ ರವರ ಜಮೀನು
ಪಶ್ಚಿಮಕ್ಕೆ: ಇದೇ ನಂ.ಪೈಕಿ ಉಳಿಕೆ ಜಮೀನು
ಉತ್ತರಕ್ಕೆ: ಸರ್ವೆ ನಂ.15ರಲ್ಲಿ ಬಿಟ್ಟಿರುವ ದಾರಿ
ದಕ್ಷಿಣಕ್ಕೆ: ಗ್ರಾಮದ ಮುಖ್ಯ ರಸ್ತೆ

ಪೂರ್ವಕ್ಕೆ: ಇದೇ ನಂಬರ್ ಪೈಕಿ ಜಮೀನು
ಪಶ್ಚಿಮಕ್ಕೆ: ಕೃಷ್ಣಪ್ಪ ರವರ ಜಮೀನು
ಉತ್ತರಕ್ಕೆ: ದಾರಿ
ದಕ್ಷಿಣಕ್ಕೆ: ಸರ್ವೆ ನಂ.2/4 ಬಿ ರ ದಾರಿ

ಜಿಲ್ಲಾಧಿಕಾರಿಗಳು,
ಬೆಂಗಳೂರು ಗ್ರಾಮಾಂತರ ಜಿಲ್ಲೆ,
ಬೆಂಗಳೂರು.

ಪಿ.ಆರ್.920

**ಪ್ರಾಂಶುಪಾಲರ ಕಛೇರಿ, ಸರ್ಕಾರಿ ಶುಶ್ರೂಷಾ ಮಹಾ ವಿದ್ಯಾಲಯ ಕೋಟೆ, ಬೆಂಗಳೂರು-2**

**ಸಂಖ್ಯೆ: ಸಶುಮವಿ: ಸಿಬ್ಬಂದಿ:10: 2006-07, ಬೆಂಗಳೂರು, ದಿನಾಂಕ:31ನೇ ಮೇ, 2006**

**ವಿಷಯ:** ಶ್ರೀ ಹೆಚ್.ಹೆಚ್. ದಾಸೇಗೌಡ, ಉನ್ಯಾಸಕರು, ಇವರು ಕರ್ತವ್ಯಕ್ಕೆ ವರದಿ ಮಾಡಿಕೊಂಡಿರುವ ಬಗ್ಗೆ.

**ಉಲ್ಲೇಖ:** (1) ಸರ್ಕಾರದ ಅಧಿಸೂಚನೆ ಸಂಖ್ಯೆ: ಆಕುಕ:23:ಎಂ.ಎಂ.ಸಿ. 2004, ದಿನಾಂಕ: 22.05.2006.

(2) ನಿರ್ದೇಶಕರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು ಬೆಂಗಳೂರು, ಇವರ ಚಲನ ಆದೇಶ ಸಂಖ್ಯೆ: ಎನ್‌ಆರ್‌ಎಸ್ (1): 20: 2006-07, ದಿನಾಂಕ:29.05.2006.

ಮೇಲಿನ ವಿಷಯಕ್ಕೆ ಸಂಬಂಧಿಸಿದಂತೆ ಶ್ರೀ ಹೆಚ್.ಹೆಚ್. ದಾಸೇಗೌಡ, ಉಪನ್ಯಾಸಕರು, ಇವರನ್ನು ಉಲ್ಲೇಖಿತ ಅಧಿಸೂಚನೆಯ ಮೇರೆಗೆ ಈ ವಿದ್ಯಾಲಯದಲ್ಲಿ ಖಾಲಿ ಇರುವ ಉಪನ್ಯಾಸಕರ ಹುದ್ದೆಯಲ್ಲಿ ನೇಮಿಸಲಾಗಿದೆ.

ಆದ್ದರಿಂದ, ಸದರಿಯವರು ಈ ಕಛೇರಿಯ ಅಧಿಕೃತಜ್ಞಾಪನಾ ಪತ್ರದ ಸಂಖ್ಯೆ: ಸಮಮ: ಸಿಬ್ಬಂದಿ:10:2006-07, ದಿನಾಂಕ: 30.05.2006ರ ಪ್ರಕಾರ ದಿನಾಂಕ: 30.05.2006 ರಂದು ಅಪರಾಹ್ನ ಬಿಡುಗಡೆಗೊಳಿಸಿದ್ದು ಈ ವಿದ್ಯಾಲಯದಲ್ಲಿ ದಿನಾಂಕ: 31.05.2006 ರಂದು ಪೂರ್ವಾಹ್ನ ಖಾಲಿ ಇರುವ ಉಪನ್ಯಾಸಕರ ಹುದ್ದೆಗೆ ಕರ್ತವ್ಯಕ್ಕೆ ವರದಿ ಮಾಡಿಕೊಂಡಿರುತ್ತಾರೆ.

ಈ ವಿದ್ಯಾಲಯದಲ್ಲಿ ಕರ್ತವ್ಯಕ್ಕೆ ವರದಿ ಮಾಡಿಕೊಂಡಿರುವ ಬಗ್ಗೆ ಸೂಕ್ತ ಸಿಟಿಸಿ ಗರನ್ನೂ ತಯಾರಿಸಿ ಮೇಲು ಸಹಿಯೊಡನೆ ಮಾಹಿತಿಗೆ ಮತ್ತು ಸೂಕ್ತ ಕ್ರಮಕ್ಕಾಗಿ ಈ ಮೂಲಕ ಸಲ್ಲಿಸಲಾಗಿದೆ.

ಪ್ರಾಂಶುಪಾಲರು,
ಸರ್ಕಾರಿ ಶುಶ್ರೂಷಾ ಮಹಾ ವಿದ್ಯಾಲಯ,
ಬೆಂಗಳೂರು-2.

ಪಿ.ಆರ್.921

**ಕರ್ನಾಟಕ ವಿಧಾನ ಪರಿಷತ್ತು**

**ವಿಷಯ:** ಶ್ರೀ ಅಬ್ದುಲ್ ರೆಹಮಾನ್, ವಾಹನ ಚಾಲಕ, ಕರ್ನಾಟಕ ವಿಧಾನ ಪರಿಷತ್ತು ಇವರನ್ನು ಸರ್ಕಾರಿ ಸೇವೆಯಿಂದ ತೆಗೆದುಹಾಕುವ ಬಗ್ಗೆ.

**ಓದಲಾಗಿದೆ:** (1) ಆದೇಶ ಸಂಖ್ಯೆ: ಕವಿಪ/ ಆ-1/ 86/ ಇವಿದಂ/ 2003, ದಿನಾಂಕ: 27.10.2003.

(2) ಕರ್ತವ್ಯಕ್ಕೆ ಹಾಜರಾಗುವಂತೆ ಸೂಚಿಸಿ, ದಿನಾಂಕ: 23.07.2004ರ ಸಂಜೆವಾಣಿ ಹಾಗೂ ದಿನಾಂಕ: 24.07.2004ರ ಪ್ರಜಾವಾಣಿ ಪತ್ರಿಕೆಗಳಲ್ಲಿ ತಿಳುವಳಿಕೆ ಪತ್ರ ಪ್ರಕಟಣೆ.

(3) ದಿನಾಂಕ:14.05.2005ರಿಂದ ಕರ್ತವ್ಯಕ್ಕೆ ಅನಧಿಕೃತ ಗೈರು ಹಾಜರಾದ ಕಾರಣ ದಿನಾಂಕ:28.01.2006ರಂದು ಪ್ರಜಾವಾಣಿ ಹಾಗೂ ದಿನಾಂಕ:31.01.2006ರ ಡೈಲಿ ಪಾಸ್‌ಬಾನ್ ದಿನಪತ್ರಿಕೆಗಳಲ್ಲಿ ತಿಳುವಳಿಕೆ ಪತ್ರ ಪ್ರಕಟಣೆ.

(4) ಪೊಲೀಸ್ ಇನ್ಸ್‌ಪೆಕ್ಟರ್, ಪೊಲೀಸ್ ಠಾಣೆ, ವಿಧಾನಸೌಧ ಇವರಿಂದ ಬಂದಿರುವ ಪತ್ರಗಳು.

(5) ಭಾರತದ ಸಂವಿಧಾನದ ಅನುಚ್ಛೇದ 311 (2) ಹಾಗೂ 1957ರ ಕರ್ನಾಟಕ ನಾಗರೀಕ ಸೇವಾ/ ವರ್ಗೀಕರಣ ನಿಯಂತ್ರಣ ಮತ್ತು ಮೇಲ್ಮನವಿ) ನಿಯಮ 14(ii) ರನ್ವಯ.

**ಪ್ರಸ್ತಾವನೆ:**

ಓದಲಾಗಿರುವ ಕ್ರಮಸಂಖ್ಯೆ: (1)ರಲ್ಲಿ ಕರ್ನಾಟಕ ವಿಧಾನ ಪರಿಷತ್ತಿನ ಸಚಿವಾಲಯದಲ್ಲಿ ವಾಹನ ಚಾಲಕರಾಗಿ ಕಾರ್ಯನಿರ್ವಹಿಸುತ್ತಿದ್ದ ಶ್ರೀ ಅಬ್ದುಲ್ ರೆಹಮಾನ್, ಇವರು ಕಛೇರಿಗೆ ಅನಧಿಕೃತ ಗೈರು ಹಾಜರಿ ಹಾಗೂ ಸರ್ಕಾರಿ ಹಣ ದುರುಪಯೋಗ ಪಡಿಸಿಕೊಂಡಿರುವುದಕ್ಕೆ ಸಂಬಂಧಿಸಿದಂತೆ ಇಲಾಖಾ ವಿಚಾರಣೆ ನಡೆಸಿ, ಸದರಿ ನೌಕರರ ವಿರುದ್ಧ ಮಾಡಲಾಗಿರುವ ಎಲ್ಲಾ ಆಪಾದನೆಗಳು ರುಜುವಾತಾಗಿದ್ದು, ದಿನಾಂಕ: 17.03.2003 ರಿಂದ 08.09.2003ರವರೆಗೆ ಒಟ್ಟು 176 ದಿನಗಳ ಅನಧಿಕೃತ ಗೈರು ಹಾಜರಾದ ಅವಧಿಯನ್ನು ವೇತನ ರಹಿತ ರಜೆಯನ್ನಾಗಿ ಪರಿಗಣಿಸಿ ಸದರಿಯವರ ಮುಂದಿನ ಎರಡು ವಾರ್ಷಿಕ ವೇತನ ಬಡ್ತಿಗಳನ್ನು ಸಂಚಿತ ರಹಿತ ಪರಿಣಾಮದೊಂದಿಗೆ ತಡೆಹಿಡಿಯುವ ದಂಡನೆಯನ್ನು ವಿಧಿಸಲಾಗಿರುತ್ತದೆ.

ಓದಲಾಗಿರುವ ಕ್ರಮ ಸಂಖ್ಯೆ: (2)ರಲ್ಲಿ ಶ್ರೀ ಅಬ್ದುಲ್ ರೆಹಮಾನ್ ಇವರು ದಿನಾಂಕ: 03.12.2003 ರಿಂದ ಕಛೇರಿಗೆ ಅನಧಿಕೃತ ಗೈರು ಹಾಜರಾದ ಕಾರಣ ದಿನಾಂಕ: 04.05.2004ರಂದು ಕಛೇರಿ ವತಿಯಿಂದ ಪತ್ರ ಬರೆದು, ಕಛೇರಿಗೆ ಹಾಜರಾಗದ ಕಾರಣ ದಿನಾಂಕ: 23.07.2004ರ ಸಂಜೆವಾಣಿ ಹಾಗೂ ದಿನಾಂಕ: 24.07.2004ರ ಪ್ರಜಾವಾಣಿ ದಿನಪತ್ರಿಕೆಗಳಲ್ಲಿ ಕರ್ತವ್ಯಕ್ಕೆ ಹಾಜರಾಗಬೇಕೆಂದು ಪ್ರಕಟಿಸಲಾಗಿದ್ದು, ಆದಾಗ್ಯೂ ಕರ್ತವ್ಯಕ್ಕೆ ಹಾಜರಾಗದಿದ್ದ ಕಾರಣ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮ 14 (ii)ರ ರೀತ್ಯಾ ಸೇವೆಯಿಂದ ವಜಾ ಮಾಡುವ ಕುರಿತು ಕಡತ ಸಲ್ಲಿಸಲಾಗಿ ಮಾನ್ಯ ಸಭಾಪತಿಯವರು ಪರಿಶೀಲಿಸಿ ಸದರಿಯವರನ್ನು ಕರ್ತವ್ಯಕ್ಕೆ ಹಾಜರಾಗಲು ಅನುಮತಿ ನೀಡಿರುತ್ತಾರೆ. ಅದರಂತೆ, ದಿನಾಂಕ:12.04.2005ರಂದು ಸದರಿಯವರು ಕರ್ತವ್ಯಕ್ಕೆ ಹಾಜರಾಗಿರುತ್ತಾರೆ.

ಓದಲಾಗಿರುವ ಕ್ರಮಸಂಖ್ಯೆ: (3)ರಲ್ಲಿ ಶ್ರೀ ಅಬ್ದುಲ್ ರೆಹಮಾನ್ ಇವರು ದಿನಾಂಕ: 14.05.2005 ರಿಂದ ಪುನಃ ಕರ್ತವ್ಯಕ್ಕೆ ಅನಧಿಕೃತ ಗೈರು ಹಾಜರಾಗಿರುತ್ತಾರೆ. ಈ ಸಂಬಂಧದಲ್ಲಿ ದಿನಾಂಕ: 09.08.2005ರಂದು ಕಛೇರಿ ವತಿಯಿಂದ ಪತ್ರ ಬರೆಯಲಾಗಿದ್ದು, ಸದರಿ ಪತ್ರವನ್ನು ಅವರ ಮಗಳು ಸ್ವೀಕರಿಸಿದ್ದರೂ ಕಛೇರಿಗೆ ಹಾಜರಾಗದ ಕಾರಣ ದಿನಾಂಕ: 28.01.2006ರಂದು ಪ್ರಜಾವಾಣಿ ಮತ್ತು ದಿನಾಂಕ: 31.01.2006ರ ಡೈಲಿ ಪಾಸ್‌ಬಾನ್ ದಿನಪತ್ರಿಕೆಗಳಲ್ಲಿ ತಿಳುವಳಿಕೆ ಪತ್ರ ಪ್ರಕಟಣೆಗೊಂಡ ದಿನಾಂಕದಿಂದ ಒಂದು ತಿಂಗಳೊಳಗಾಗಿ ಕರ್ತವ್ಯದ ಮೇಲೆ ಹಾಜರಾಗಬೇಕೆಂದು, ಹಾಜರಾಗದಿದ್ದಲ್ಲಿ ನಿಯಮಾವಳಿಗಳ ರೀತ್ಯಾ ಕ್ರಮಕೈಗೊಳ್ಳಲಾಗುವುದೆಂದು ಪ್ರಕಟಿಸಲಾಗಿರುತ್ತದೆ. ಆದರೂ ಕರ್ತವ್ಯಕ್ಕೆ ಹಾಜರಾಗಿರುವುದಿಲ್ಲ.

ಓದಲಾಗಿರುವ ಕ್ರಮಸಂಖ್ಯೆ: (4)ರಲ್ಲಿ ಪೊಲೀಸ್ ಇನ್ಸ್‌ಪೆಕ್ಟರ್, ವಿಧಾನಸೌಧ ಪೊಲೀಸ್ ಠಾಣೆ ಇವರಿಂದ ಶ್ರೀ ಅಬ್ದುಲ್ ರೆಹಮಾನ್‌ರವರ ಮೇಲೆ ದೂರು ದಾಖಲಾಗಿ ಶಿಕ್ಷೆಯಾಗಿರುವುದರಿಂದ ಪೊಲೀಸರ ವಶಕ್ಕೆ ನೀಡುವಂತೆ ಕೋರಿ ದಿನಾಂಕ:19.08.2005, 26.09.2005 ಹಾಗೂ 21.10.2005ರಂದು ಸಚಿವಾಲಯಕ್ಕೆ ಪತ್ರಗಳು ಬಂದಿರುತ್ತವೆ.

ಓದಲಾಗಿರುವ ಕ್ರಮಸಂಖ್ಯೆ (5)ರಲ್ಲಿ ಭಾರತ ಸಂವಿಧಾನದ ಅನುಚ್ಛೇದ 311(2)ರಲ್ಲಿ ಹೇಳಿರುವಂತೆ ನೌಕರನಿಗೆ ಅವನ ವಿರುದ್ಧದ ಆಪಾದನೆಗಳನ್ನು ತಿಳಿಸಿ ಅವಕಾಶವನ್ನು ನೀಡಿ ಪತ್ರಿಕೆಗಳಲ್ಲಿ ಹಾಜರಾತಿ ತಿಳುವಳಿಕೆ ಪತ್ರವನ್ನು ಪ್ರಕಟಿಸಿದಾಗ್ಯೂ ನೌಕರನು ಕೆಲಸದ ಮೇಲೆ ಹಾಜರಾಗದಿರುವುದರಿಂದ ಮತ್ತು ನೌಕರನನ್ನು ಸಂಪರ್ಕಿಸಲು ಸಾಧ್ಯವಾಗದಿದ್ದರಿಂದ ಹಾಗೂ 1957ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ

ನಿಯಂತ್ರಣ ಮತ್ತು ಮೇಲ್ಮನವಿ) ನಿಯಮ 14(ii)ರಲ್ಲಿ ಹೇಳಿರುವಂತೆ ನೌಕರನು ತಲೆಮರಿಸಿಕೊಂಡಿದ್ದರೆ, ವಿಚಾರಣೆಯಲ್ಲಿ ಭಾಗವಹಿಸದಿದ್ದರೆ ಅಥವಾ ಅವನನ್ನು ಸಂಪರ್ಕಿಸುವುದು ಸಾಧ್ಯವಾಗದೆಂಬ ಕಾರಣವನ್ನು ಲಿಖಿತ ಮೂಲಕ ದಾಖಲೆ ಮಾಡಿರುವುದರಿಂದ ಶಿಸ್ತು ಪ್ರಾಧಿಕಾರಿಯು ಸೂಕ್ತವೆಂದು ಭಾವಿಸುವಂತಹ ಆದೇಶವನ್ನು ಹೊರಡಿಸಲು ಶಿಸ್ತು ಪ್ರಾಧಿಕಾರಕ್ಕೆ ಅಧಿಕಾರವಿರುತ್ತದೆ.

ಶಿಸ್ತು ಪ್ರಾಧಿಕಾರವು ಸದರಿ ಪ್ರಕರಣ ಹಾಗೂ ಇದಕ್ಕೆ ಸಂಬಂಧಪಟ್ಟಂತೆ ದಾಖಲು ಮಾಡಿರುವ ದಾಖಲಾತಿಗಳನ್ನು ಸಮಗ್ರವಾಗಿ ಪರಿಶೀಲಿಸಿ, ಶ್ರೀ ಅಬ್ದುಲ್ ರೆಹಮಾನ್, ವಾಹನ ಚಾಲಕ ಇವರು ಅನಧಿಕೃತವಾಗಿ ಗೈರು ಹಾಜರಾಗಿರುವುದರಿಂದ ಹಾಗೂ ಇದಕ್ಕೆ ಸಂಬಂಧಪಟ್ಟ ಎಲ್ಲಾ ದಾಖಲಾತಿಗಳಿರುವುದರಿಂದ ಸದರಿಯವರನ್ನು ಸೇವೆಯಿಂದ ತೆಗೆದು ಹಾಕುವುದು ಸೂಕ್ತವೆಂದು ತೀರ್ಮಾನಿಸಿ ಈ ಕೆಳಕಂಡಂತೆ ಆದೇಶವನ್ನು ನೀಡಿದೆ.

**ಆದೇಶ ಸಂಖ್ಯೆ: ಕವಿಪ/ ಆ-1/ 12/ ಸೇತೆ/ 2006, ಬೆಂಗಳೂರು, ದಿನಾಂಕ: 24ನೇ ಮೇ, 2006**

ಶ್ರೀ ಅಬ್ದುಲ್ ರೆಹಮಾನ್, ವಾಹನ ಚಾಲಕ, ಇವರು ದಿನಾಂಕ: 14.05.2005 ರಿಂದ ಕಛೇರಿಗೆ ಅನಧಿಕೃತ ಗೈರು ಹಾಜರಾಗಿರುತ್ತಾರೆ. ಆದಕಾರಣ ದಿನಾಂಕ: 09.08.2005 ರಂದು ಕಛೇರಿವತಿಯಿಂದ ಪತ್ರವನ್ನು ರವಾನಿಸಲಾಗಿದ್ದು, ಕೂಡಲೇ ಕರ್ತವ್ಯಕ್ಕೆ ಹಾಜರಾಗುವುದು ತಪ್ಪಿದಲ್ಲಿ ನಿಯಮಾನುಸಾರ ಮುಂದಿನ ಕ್ರಮಕೈಗೊಳ್ಳಲಾಗುವುದು ಎಂದು ಅಂತಿಮವಾಗಿ ಎಚ್ಚರಿಸಲಾಗಿತ್ತು. ಸದರಿ ಪತ್ರವನ್ನು ಅವರ ಮಗಳು ದಿನಾಂಕ: 06.09.2005 ರಂದು ಸ್ವೀಕರಿಸಿದ್ದರೂ ಸಹ ಸದರಿಯವರು ಕರ್ತವ್ಯಕ್ಕೆ ಹಾಜರಾಗಿರುವುದಿಲ್ಲ. ಈ ಸಂಬಂಧದಲ್ಲಿ ದಿನಾಂಕ: 28.01.2006ರ ಪ್ರಜಾವಾಣಿ ಮತ್ತು ದಿನಾಂಕ: 31.01.2006ರ ಡೈಲಿ ಪಾಸ್‌ಬಾನ್ ಪತ್ರಿಕೆಗಳಲ್ಲಿ, ಒಂದು ತಿಂಗಳೊಳಗಾಗಿ ಕರ್ತವ್ಯಕ್ಕೆ ಹಾಜರಾಗುವಂತೆ ಹಾಜರಾತಿ ತಿಳಿವಳಿಕೆ ಪತ್ರವನ್ನು ಪ್ರಕಟಿಸಿದ್ದರೂ ಸಹ ಕರ್ತವ್ಯಕ್ಕೆ ಹಾಜರಾಗಿರುವುದಿಲ್ಲ. ಅಲ್ಲದೆ ವಿಧಾನಸೌಧ ಪೊಲೀಸ್ ಠಾಣೆಯ ಪೊಲೀಸ್ ಇನ್ಸ್‌ಪೆಕ್ಟರ್‌ರವರು ಸಹ ಸದರಿಯವರನ್ನು ದಸ್ತಗಿರಿ ಮಾಡಲು ಶೋಧನೆ ನಡೆಸಿರುತ್ತಾರೆ. ಮೇಲ್ಕಾಣಿಸಿದ ಅಂಶಗಳ ಹಿನ್ನೆಲೆಯಲ್ಲಿ ಹಾಗೂ ಭಾರತ ಸಂವಿಧಾನದ ಅನುಚ್ಛೇದ 311 (2)ರ ರೀತ್ಯ ಮತ್ತು 1957ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ ನಿಯಂತ್ರಣ ಮತ್ತು ಮೇಲ್ಮನವಿ) ನಿಯಮ 14 (ii) ನ್ನು ಓದಿದಂತೆ ಹಾಗೂ 2003ನೇ ಸಾಲಿನ ಕರ್ನಾಟಕ ವಿಧಾನ ಪರಿಷತ್ತಿನ ಸಚಿವಾಲಯದ ನೇಮಕಾತಿ ಹಾಗೂ ಸೇವಾ ಷರತ್ತುಗಳ ನಿಯಮಾವಳಿಗಳ ನಿಯಮ (8)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಅಬ್ದುಲ್ ರೆಹಮಾನ್, ವಾಹನ ಚಾಲಕ, ಕರ್ನಾಟಕ ವಿಧಾನ ಪರಿಷತ್ತು ಇವರನ್ನು ದಿನಾಂಕ: 14.05.2005 ರಿಂದ ಜಾರಿಗೆ ಬರುವಂತೆ ಸರ್ಕಾರಿ ಸೇವೆಯಿಂದ ತೆಗೆದು ಹಾಕಲಾಗಿದೆ.

ಸಭಾಪತಿಯವರ ಆದೇಶಾನುಸಾರ,
**ಸೋಮನಾಯಕ್**
ಉಪ ಕಾರ್ಯದರ್ಶಿ,
ಕರ್ನಾಟಕ ವಿಧಾನ ಪರಿಷತ್ತು.

ಪಿ.ಆರ್.922

**OFFICE OF THE DEPUTY COMMISSIONER, TUMKUR DISTRICT, TUMKUR**

**Preliminary Notification DUDC(2) CR. 169/ 06-07, Dated: 15th May, 2006**

Whereas the Deputy Commissioner, Tumkur is satisfied.

I. That the area situation, S. Nos. P.T.S. Nos. Extent and boundaries and other details of which are specified in schedule below situated within the limits of City Municipal Council, Tumkur, Tumkur District, are a source of danger to the health, safety and convenience of the public of the area and of its neighborhood by reason of the said area being in sanitary, squaid and over crowded.

II. The buildings in the said area used or intended to be used for human habitation area over crowded and unfit for human habitation for want of repair, stability, freedom from damp; natural light and air, water supply, drainage and sanitary convenience;

It is hereby notified for the information of all persons interested in the said area that in exercise of the powers delegated in Government notification No.HUD 49 MCS 85 Dated: 17th April 1986 to exercise powers under section 3 of the Karnataka Slum areas (Improvement and clearance) Act, 1973, Karnataka Act 33 of1974 to declare the said area to be a slum area.

Any representation against the proposed action may be made to the Deputy Commissioner, Tumkur District, Tumkur within 15 days from the date of publication of this notification.

**SCHEDULE**

| Sl. No. | Name of the location of the slum | Name of the owner | Survey No. | Extent | Boundaries |
|---|---|---|---|---|---|
| 1. | Devarayapattana Colony Slum Area, Tumkur. | Govt. Kharab | 144 | A-G 2-25 | East: Temple & Govt. tank bund.<br>West: Vacant land<br>North: Vacant land<br>South: Vacant land |

Deputy Commissioner
Tumkur District, Tumkur.

PR-925

**OFFICE OF THE DEPUTY COMMISSIONER, TUMKUR DISTRICT, TUMKUR**

**Preliminary Notification DUDC(2) CR. 996/ 06-07, Dated: 15th May, 2006**

Whereas the Deputy Commissioner, Tumkur is satisfied.

I. That the area situation, S. Nos. P.T.S. Nos. Extent and boundaries and other details of which are specified in schedule below situated within the limits of City Municipal Council, Tumkur, Tumkur

District, are a source of danger to the health, safety and convenience of the public of the area and of its neighborhood by reason of the said area being in sanitary, squalid and over crowded.

II. The buildings in the said area used or intended to be used for human habitation area over crowded and unfit for human habitation for want of repair, stability, freedom from damp; natural light and air, water supply, drainage and sanitary convenience;

It is hereby notified for the information of all persons interested in the said area that in exercise of the powers delegated in Government notification No.HUD 49 MCS 85 Dated: 17th April 1986 to exercise powers under section 3 of the Karnataka Slum areas (Improvement and clearance) Act, 1973, Karnataka Act 33 of1974 to declare the said area to be a slum area.

Any representation against the proposed action may be made to the Deputy Commissioner, Tumkur District, Tumkur within 15 days from the date of publication of this notification.

**SCHEDULE**

| Sl. No. | Name of the location of the slum | Name of the owner | Survey No. | Extent | Boundaries |
|---|---|---|---|---|---|
| 1. | Jayanagar Slum Area, Tumkur. | City Municipal Council | 50 | A-G 0.31 | East: Pvt. Land<br>West: Nazarabad Extension.<br>North: Nazarabad Extension.<br>South: Road. |

Deputy Commissioner
Tumkur District, Tumkur.

PR-926

**P¼ñÌvP Êñn¦ YñläPÊ Ôññn¦Yç ¿ËäñÊ BNïôñóY, ÃàÔÃÔ¼, älYüìN¤ý, ÄNYçöÊô–560 001**

**ÕÝNïô0** ಶ್ರೀ ಬಿ.ಕೆ.ಕಡಲಿ, ಗ್ರೂಪ್ ಡಿ ನೌಕರ, ಜಿಲ್ಲಾ ಗ್ರಾಹಕರ ವೇದಿಕೆ, ಬೆಳಗಾಂ ಜಿಲ್ಲೆ ಇವರ ಅನಧಿಕೃತ ಗೈರು ಹಾಜರಿ ಬಗ್ಗೆ ಶಿಸ್ತು ಕ್ರಮ ಕುರಿತು.

**L¹ÑñZ¹0**

೧. ಕರ್ನಾಟಕ ನಾಗರೀಕ ಸೇವಾ(ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ ನಿಯಮಗಳು) ೧೯೫೭ರ ನಿಯಮ ೧೧(೪)ರನ್ವಯ ತಿಳುವಳಿಕೆ ಸಂಖ್ಯೆ ಕರಾಆ/ಆಡಳಿತ/ಡಿ ದರ್ಜೆ/೧೫/೧೯೯೮-೯೯ ದಿನಾಂಕ ೦೨.೦೮.೨೦೦೫

೨. ರಾಜ್ಯ ಆಯೋಗದ ಸಮಸಂಖ್ಯೆಯ ಆದೇಶ ದಿನಾಂಕ ೦೨.೦೨.೨೦೦೬

೩. ಶ್ರೀ ನಾಡಿಗ ಜಯಸ್ವಾಮಿ, ಅಧ್ಯಕ್ಷರು, ಜಿಲ್ಲಾ ಗ್ರಾಹಕರ ವ್ಯಾಜ್ಯಗಳ ಪರಿಹಾರ ವೇದಿಕೆ, ದಾವಣಗೆರೆ ಹಾಗೂ ಶ್ರೀ ಬಿ.ಕೆ.ಕಡಲಿ ಇವರ ಶಿಸ್ತು ಕ್ರಮದ ಇಲಾಖಾ ವಿಚಾರಣಾಧಿಕಾರಿ ವರದಿ ದಿನಾಂಕ ೨೪.೦೪.೨೦೦೬

೪. ರಾಜ್ಯ ಆಯೋಗದ ಸಮಸಂಖ್ಯೆಯ ತಿಳುವಳಿಕೆ ದಿನಾಂಕ ೧೭.೦೫.೨೦೦೬

೫. ಶ್ರೀ ಬಿ.ಕೆ.ಕಡಲಿ ಇವರ ಮನವಿ ದಿನಾಂಕ ೨೬.೦೫.೨೦೦೬

**¿ÌàñÔ¼0**

ಶ್ರೀ ಬಿ.ಕೆ.ಕಡಲಿ ಗ್ರೂಪ್ ಡಿ ನೌಕರ ಈತ ಮೂಲತಃ ದಿನಗೂಲಿ ನೌಕರನಾಗಿ ಸರ್ಕಾರಿ ಸೇವೆಗೆ ಸೇರಿ ತದನಂತರ ಖಾಯಂಗೊಂಡು ಸಂಖ್ಯಾತಿರಿಕ್ತ ಹುದ್ದೆಯಿಂದ ಕರ್ನಾಟಕ ಗ್ರಾಹಕ ಸಂರಕ್ಷಣಾ ರಾಜ್ಯ ಆಯೋಗ ಮತ್ತು ಜಿಲ್ಲಾ ವೇದಿಕೆಗಳ ಸೇವೆಗೆ ಮರುವಿನ್ಯಾಸಗೊಂಡು ದಿನಾಂಕ ೧೧.೦೬.೧೯೯೮ರಿಂದ ಬೆಳಗಾಂ ಜಿಲ್ಲಾ ವೇದಿಕೆಯಲ್ಲಿ ಕಾರ್ಯನಿರ್ವಹಿಸುತ್ತಿರುವ ಗ್ರೂಪ್ ಡಿ ನೌಕರರಾಗಿರುತ್ತಾರೆ. ಈತ ರಜೆ ಮಂಜೂರು ಮಾಡುವ ಸಕ್ಷಮ ಪ್ರಾಧಿಕಾರದಿಂದ ಯಾವುದೇ ರಜೆಯನ್ನು ಮಂಜೂರು ಮಾಡಿಸಿಕೊಳ್ಳದೆ ಮತ್ತು ಯಾವುದೇ ಅನುಮತಿಯು ಇಲ್ಲದೆ ದಿನಾಂಕ ೨೬.೧೧.೨೦೦೪ರಿಂದ ದಿನಾಂಕ ೨೦.೦೩.೨೦೦೫(ಎದಿಸೇ)ರವರೆಗೆ ಅನಧಿಕೃತ ಗೈರು ಹಾಜರಾಗಿದ್ದು ದಿನಾಂಕ ೨೧.೦೩.೨೦೦೫ರಂದು ಕರ್ತವ್ಯಕ್ಕೆ ಹಾಜರಾಗಿರುತ್ತಾರೆ. ದಿನಾಂಕ ೨೩.೦೩.೨೦೦೫ರಂದು ಸ್ವಯಂ ನಿವೃತ್ತಿ ಬಯಸಿ ಅರ್ಜಿಯನ್ನು ಸಲ್ಲಿಸಿದ್ದು ಸದರಿ ಅರ್ಜಿಯನ್ನು ಪುರಸ್ಕರಿಸದಂತೆ ಆತನ ಹೆಂಡತಿ ಮಕ್ಕಳು ದಿನಾಂಕ ೨೭.೦೭.೨೦೦೫ರಂದಿನ ಮನವಿ ಮೂಲಕ ಪ್ರಾರ್ಥಿಸಿರುತ್ತಾರೆ. ಶ್ರೀ ಬಿ.ಕೆ.ಕಡಲಿ ಈತ ದಿನಾಂಕ ೨೪.೦೩.೨೦೦೫ರಿಂದ ದಿನಾಂಕ ೧೫.೦೮.೨೦೦೫(ಎದಿಸೇ)ರವರೆಗೆ ಪುನಃ ಅನಧಿಕೃತ ಗೈರು ಹಾಜರಿಯಲ್ಲಿದ್ದು ದಿನಾಂಕ ೧೬.೦೮.೨೦೦೫ರಂದು ಕರ್ತವ್ಯಕ್ಕೆ ಹಾಜರಾಗಿರುತ್ತಾರೆ. ರಜೆ ಮಂಜೂರಾತಿಗೆ ಸಂಬಂಧಿಸಿದಂತೆ ನಿಗಧಿತ ರಜಾ ಅರ್ಜಿಯನ್ನು ಹಾಗೂ ಅವಶ್ಯವಿರುವ ವೈದ್ಯಕೀಯ ಪ್ರಮಾಣ ಪತ್ರಗಳನ್ನು ಹಾಜರುಪಡಿಸದೆ ಜಿಲ್ಲಾ ವೇದಿಕೆಯ ಸಕ್ಷಮ ಪ್ರಾಧಿಕಾರದಿಂದ ರಜೆಯನ್ನು ಮಂಜೂರು ಮಾಡಿಸಿಕೊಳ್ಳದೆ ಅನಧಿಕೃತ ಗೈರು ಹಾಜರಿಯಲ್ಲಿರುತ್ತಾರೆ. ಈ ಅನಧಿಕೃತ ಗೈರು ಹಾಜರಿಗೆ ಸಂಬಂಧಿಸಿದಂತೆ ಮೇಲೆ ಕ್ರಮಸಂಖ್ಯೆ (೧)ರಲ್ಲಿ ಓದಲಾಗುವ ತಿಳುವಳಿಕೆಯೊಂದಿಗೆ ಆರೋಪ ಪಟ್ಟಿಯನ್ನು ಜಾರಿ ಮಾಡಲಾಗಿತ್ತು, ಅನಧಿಕೃತ ಗೈರು ಹಾಜರಿಗೆ ಸಂಬಂಧಿಸಿದಂತೆ ಸೂಕ್ತ ಸಮಜಾಯಿಷಿಯನ್ನು ಶ್ರೀ ಬಿ.ಕೆ.ಕಡಲಿ ಈತ ಸಲ್ಲಿಸದಿದ್ದರಿಂದ ಮೇಲೆ ಕ್ರಮಸಂಖ್ಯೆ ೦೨.೦೨.೨೦೦೬ರಲ್ಲಿ ಓದಲಾಗುವ ಆದೇಶದಡಿಯಲ್ಲಿ ಶ್ರೀ ನಾಡಿಗ ಜಯಸ್ವಾಮಿ, ಅಧ್ಯಕ್ಷರು, ಜಿಲ್ಲಾ ಗ್ರಾಹಕರ ವ್ಯಾಜ್ಯಗಳ ಪರಿಹಾರ ವೇದಿಕೆ, ದಾವಣಗೆರೆ, ಇವರನ್ನು ಇಲಾಖಾ ವಿಚಾರಣಾಧಿಕಾರಿಯಾಗಿ ನೇಮಕಾತಿ ಮಾಡಿ ಈ ಪ್ರಕರಣದ ವಿಚಾರಣೆಯನ್ನು ಜರುಗಿಸಿ ವರದಿ ಸಲ್ಲಿಸುವಂತೆ ಸೂಚಿಸಿದ ಅನುಸಾರ, ಶ್ರೀ ನಾಡಿಗ ಜಯಸ್ವಾಮಿ ಇವರು ವಿಚಾರಣೆಯನ್ನು ಜರುಗಿಸಿ ಮೇಲೆ ಕ್ರಮಸಂಖ್ಯೆ (೧)ರಲ್ಲಿ ಓದಲಾಗುವ ತಿಳುವಳಿಕೆಯೊಂದಿಗೆ ಜಾರಿ ಮಾಡಲಾಗಿದ್ದ ಆರೋಪವು ಸಾಬೀತಾಗಿರುತ್ತದೆಯೆಂದು ವರದಿಯನ್ನು ಮೇಲೆ ಕ್ರಮಸಂಖ್ಯೆ (೩)ರಲ್ಲಿ ಓದಲಾಗುವ ವರದಿಯ ಮೂಲಕ ಸಲ್ಲಿಸಿರುತ್ತಾರೆ.

ಮೇಲೆ ಕ್ರಮಸಂಖ್ಯೆ (೩)ರಲ್ಲಿನ ವರದಿಯನ್ನು ಮೇಲೆ ಕ್ರಮಸಂಖ್ಯೆ (೪)ರಲ್ಲಿನ ಪತ್ರದ ಮೂಲಕ ಆರೋಪಿತ ನೌಕರನಾದ ಶ್ರೀ ಬಿ.ಕೆ.ಕಡಲಿ ಇವರಿಗೆ ಜಾರಿ ಮಾಡಲಾಗಿದ್ದು ಆರೋಪಿತ ನೌಕರನಾದ ಶ್ರೀ ಬಿ.ಕೆ.ಕಡಲಿ ಇವರು ತಾನು ಸಕ್ಷಮ ಪ್ರಾಧಿಕಾರದಿಂದ ರಜೆಯನ್ನು ಮಂಜೂರು ಮಾಡಿಸಿಕೊಳ್ಳದೆ ಅನಧಿಕೃತ ಗೈರು ಹಾಜರಿಯಲ್ಲಿದ್ದದ್ದು ತಪ್ಪಾಗಿದ್ದು ಆ ತಪ್ಪನ್ನು ತಾನು ಒಪ್ಪಿಕೊಳ್ಳುವುದಾಗಿ ಮತ್ತು ತನ್ನ ಹೆಂಡತಿ ಮಕ್ಕಳ ಜೀವನ ನಿರ್ವಹಣೆಗಾಗಿ ಆಗಿರುವ ತಪ್ಪನ್ನು ಮನ್ನಿಸಬೇಕೆಂದು ಕೋರಿರುತ್ತಾರೆ. ಇದನ್ನು ಹೊರತು ಪಡಿಸಿ ಆರೋಪವನ್ನು ಪ್ರತಿರೋಧಿಸುವಂತಹ ಯಾವುದೇ ದಾಖಲೆಗಳನ್ನು ಹಾಜರುಪಡಿಸಿರುವುದಿಲ್ಲ.

ಶ್ರೀ ಬಿ.ಕೆ.ಕಡಲಿ ಈತ ಬೆಳಗಾಂ ಜಿಲ್ಲಾ ವೇದಿಕೆಯ ಗ್ರೂಪ್ 'ಡಿ' ನೌಕರನಾಗಿದ್ದು, ಈತನ ಅನಧಿಕೃತ ಗೈರು ಹಾಜರಿಯಿಂದ ಜಿಲ್ಲಾ ವೇದಿಕೆಯ ದಿನನಿತ್ಯದ ಕಾರ್ಯನಿರ್ವಹಣೆಗೆ ಅಡಚಣೆಯಾಗುವುದೆಂದು ತಿಳಿದಿದ್ದೂ ಕೂಡ ಮತ್ತು ಸಕ್ಷಮ ಪ್ರಾಧಿಕಾರದಿಂದ ರಜೆಯನ್ನು ಮಂಜೂರು ಮಾಡಿಸಿಕೊಂಡ ನಂತರವೇ ರಜೆಯ ಮೇಲೆ ಹೋಗಬೇಕೆಂದು ತಿಳಿದಿದ್ದರೂ ಕೂಡ, ಸದರಿಯವರು ದಿನಾಂಕ ೨೬.೧೧.೨೦೦೪ರಿಂದ ೨೦.೦೩.೨೦೦೫(ಎದಿಸೇ)ರವರೆಗೆ

ಹಾಗೂ ೨೪.೦೩.೨೦೦೫ರಿಂದ ೧೫.೦೮.೨೦೦೫(ಎದಿಸೇ)ರವರೆಗೆ ರಜೆಯನ್ನು ಸಕ್ಷಮ ಪ್ರಾಧಿಕಾರದಿಂದ ಮಂಜೂರು ಮಾಡಿಸಿಕೊಳ್ಳದೇ ಅನಧಿಕೃತ ಗೈರು ಹಾಜರಿಯಲ್ಲಿದ್ದುದು ಸದರಿ ನೌಕರನ ದುರ್ನಡತೆ ಎಂಬುದು ನಿಸ್ಸಂದೇಹವಾಗಿ ಸಾಬೀತಾಗಿರುವುದರಿಂದ ಮತ್ತು ಶ್ರೀ ಬಿ.ಕೆ.ಕಡಲಿ ಇವರ ಅನಧಿಕೃತ ಗೈರು ಹಾಜರಿಯ ಎರಡು ಹಂತದ ಗೈರು ಹಾಜರಿ ಅವಧಿಯ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ ನಿಯಮ ೧೦೮ರನ್ವಯ ನಿರಂತರ ನಾಲ್ಕು ತಿಂಗಳ ಹಾಗೂ ೪ ತಿಂಗಳು ಮೇಲ್ಪಟ್ಟ ಅವಧಿಯಾಗದೇ ಇರುವುದರಿಂದ ಮತ್ತು ಶ್ರೀ ಬಿ.ಕೆ.ಕಡಲಿರವರು ಹೀಗೆ ಅನಧಿಕೃತ ಗೈರು ಹಾಜರಿಯಾಗಿರುವುದರಿಂದ ಜಿಲ್ಲಾ ವೇದಿಕೆಯ ಕಾರ್ಯನಿರ್ವಹಣೆಗೆ ಅಡಚಣೆ ಉಂಟಾಗಿರುವುದರಿಂದ ಶ್ರೀ ಬಿ.ಕೆ.ಕಡಲಿ ಇವರ ದುರ್ನಡತೆಗೆ ಸಂಬಂಧಿಸಿದಂತೆ ಶಿಕ್ಷೆಯನ್ನು ವಿಧಿಸುವುದು ನಿಯೋಜಿತವಾಗಿರುವುದರಿಂದ ಆತನ ಮನವಿಯನ್ನು ಪರಿಗಣಿಸಿಕೊಂಡು ಈ ಕೆಳಕಂಡ ಆದೇಶ ಮಾಡಲಾಗಿದೆ.

**ಆದೇಶ ಸಂಖ್ಯೆ ಕರಾಆ/ ಆಡಳಿತ/ ಡಿ ದರ್ಜೆ/ 15/ 1998-99, ದಿನಾಂಕ:3ನೇ ಜೂನ್, 2006**

ಕರ್ನಾಟಕ ಗ್ರಾಹಕ ಸಂರಕ್ಷಣಾ ರಾಜ್ಯ ಆಯೋಗ ಮತ್ತು ಜಿಲ್ಲಾ ವೇದಿಕೆಗಳ ಸೇವೆಯ ಗ್ರೂಪ್ ಸಿ ಮತ್ತು ಗ್ರೂಪ್ 'ಡಿ' ಸೇವೆಯ ನೇಮಕಾತಿ ಪ್ರಾಧಿಕಾರ ಹಾಗೂ ಶಿಸ್ತು ಪ್ರಾಧಿಕಾರವಾದ ನಾನು ನ್ಯಾಯಮೂರ್ತಿ ಚಂದ್ರಶೇಖರಯ್ಯ, ಅಧ್ಯಕ್ಷರು, ಕರ್ನಾಟಕ ರಾಜ್ಯ ಗ್ರಾಹಕರ ವ್ಯಾಜ್ಯಗಳ ಪರಿಹಾರ ಆಯೋಗ, ಬೆಂಗಳೂರು ಆದ ನನಗೆ ದತ್ತವಾಗಿರುವ ಅಧಿಕಾರದಡಿಯಲ್ಲಿ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ)ನಿಯಮಗಳು ೧೯೫೭ರ ನಿಯಮ ೮(iii) ರನ್ವಯ ಶ್ರೀ.ಬಿ.ಕೆ.ಕಡಲಿ ಇವರ ಎರಡು ವಾರ್ಷಿಕ ವೇತನ ಬಡ್ತಿಗಳನ್ನು ಸಂಚಿತ ಪರಿಣಾಮ ಸಹಿತವಾಗಿ ತಡೆಹಿಡಿಯಲು ಈ ಮೂಲಕ ಆದೇಶಿಸಿದೆ. ದಿನಾಂಕ ೨೬.೧೧.೨೦೦೪ರಿಂದ ೨೦.೦೩.೨೦೦೫(ಎದಿಸೇ) ಹಾಗೂ ದಿನಾಂಕ ೨೪.೦೩.೨೦೦೫ರಿಂದ ದಿನಾಂಕ ೧೫.೦೮.೨೦೦೫(ಎದಿಸೇ)ವರೆಗಿನ ಅವಧಿಯನ್ನು ಕರ್ತವ್ಯದಲ್ಲಿಲ್ಲದ ಅನಧಿಕೃತ ಗೈರು ಹಾಜರಿಯ ಅವಧಿಯೆಂದು ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ ನಿಯಮ ೧೦೬-ಎರನ್ವಯ ಪರಿಗಣಿಸಿದೆ.

ಈ ಆದೇಶದ ಪ್ರತಿಯನ್ನು ಸಂಬಂಧಪಟ್ಟ ನೌಕರನ ಸೇವಾ ಪುಸ್ತಕದಲ್ಲಿರಿಸಿ ಈ ಶಿಕ್ಷೆ ಬಗ್ಗೆ ಸೇವಾ ಪುಸ್ತಕದಲ್ಲಿ ದಾಖಲಿಸಲು ಮತ್ತು ಈ ಆದೇಶವನ್ನು ಜಾರಿಗೊಳಿಸಿದ ಬಗ್ಗೆ ರಾಜ್ಯ ಆಯೋಗಕ್ಕೆ ವರದಿಯನ್ನು ಸಲ್ಲಿಸಲು ಬೆಳಗಾಂ ಜಿಲ್ಲಾ ವೇದಿಕೆಯ ಅಧ್ಯಕ್ಷರಿಗೆ ಸೂಚಿಸಿದೆ.

ಶ್ರೀ ಬಿ.ಕೆ.ಕಡಲಿ ಈತ ಇನ್ನು ಮುಂದೆ ಸಕ್ಷಮ ಪ್ರಾಧಿಕಾರದಿಂದ ಯಾವುದೇ ರಜೆಯನ್ನು ಮಂಜೂರು ಮಾಡಿಸಿಕೊಳ್ಳದೆ ಅನಧಿಕೃತ ಗೈರು ಹಾಜರಾದಲ್ಲಿ ಅಂತಹ ಗೈರು ಹಾಜರಿಯನ್ನು ದುರ್ನಡತೆಯೆಂದು ಪರಿಗಣಿಸಿ ಸೇವೆಯಿಂದ ವಜಾ ಮಾಡಲಾಗುವುದೆಂದು ಈ ಮೂಲಕ ಎಚ್ಚರಿಕೆಯನ್ನೂ ಕೂಡ ನೀಡಲಾಗಿದೆ.

**ನ್ಯಾಯಮೂರ್ತಿ ಚಂದ್ರಶೇಖರಯ್ಯ**
ಅಧ್ಯಕ್ಷರು
ಕರ್ನಾಟಕ ರಾಜ್ಯ ಗ್ರಾಹಕರ ವ್ಯಾಜ್ಯಗಳ ಪರಿಹಾರ ಆಯೋಗ,
ಬೆಂಗಳೂರು.

ಪಿ.ಆರ್.927

## ಲೋಕೋಪಯೋಗಿ ಇಲಾಖೆ

## ಮುಖ್ಯ ಇಂಜಿನೀಯರರು, ಸಂಪರ್ಕ ಮತ್ತು ಕಟ್ಟಡ (ಉತ್ತರ), ವಲಯ ಧಾರವಾಡ ಇವರ ಕಛೇರಿಯ ನಡುವಳಿಗಳು

**ವಿಷಯ:** ಗುಲ್ಬರ್ಗಾದಲ್ಲಿ ಕರ್ನಾಟಕ ಹೈಕೋರ್ಟಿನ ಸಂಚಾರಿ ಪೀಠ ಕಟ್ಟಡದ ನಿರ್ಮಾಣಕ್ಕಾಗಿ ಟೆಂಡರ್ ಪರಿಶೀಲನಾ ಸಮೀತಿ ರಚಿಸುವ ಕುರಿತು.

**ಉಲ್ಲೇಖ:** ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧ್ಯಾದೇಶ-2000.

**ಪೀಠಿಕೆ:**

ಗುಲ್ಬರ್ಗಾದಲ್ಲಿ ಕರ್ನಾಟಕ ಹೈಕೋರ್ಟಿನ ಸಂಚಾರಿ ಪೀಠ ಸ್ಥಾಪನೆಗಾಗಿ ಕಟ್ಟಡ ನಿರ್ಮಾಣ ಕಾಮಗಾರಿಗಳಿಗಾಗಿ ಈಗಾಗಲೇ ರೂ.6545.00 ಲಕ್ಷಗಳಿಗೆ ಅಂದಾಜು ಪತ್ರಿಕೆಗೆ ಆಡಳಿತಾತ್ಮಕ ಅನುಮೋದನೆ ಸರ್ಕಾರದ ಪತ್ರ ಸಂಖ್ಯೆ: ಸಿಆಸುಇ-113-ಸೆಲುವ್ಯಾ-2005 ದಿನಾಂಕ: 20.02.2006 ಅಡಿ ಮಂಜೂರಾತಿ ದೊರೆತಿದೆ. ಸದರಿ ಕಾಮಗಾರಿಯನ್ನು ಕಾರ್ಯನಿರ್ವಾಹಕ ಇಂಜಿನೀಯರರು, ಲೋಕೋಪಯೋಗಿ ಇಲಾಖೆ, ಗುಲ್ಬರ್ಗಾ ಇವರ ಕಾರ್ಯಾಲಯದ ಟೆಂಡರ್ ನೋಟಿಫಿಕೇಶನ್ ಪತ್ರ ಸಂಖ್ಯೆ: ಇಇ: ಪಿಡಬ್ಲ್ಯೂಡಿ: ಗುಲ್ಬರ್ಗಾ: ತಾಶಾ-2: ಹೈಕೋರ್ಟ್: ಟೆಂಡರ್: 2005-06: 43 ದಿನಾಂಕ: 05.04.2006 ಅಡಿ ಮೊತ್ತ ರೂ.6000.00 ಲಕ್ಷಗಳಿಗೆ ಟೆಂಡರ್ ಕರೆಯಲಾಗಿದೆ.

ಟೆಂಡರ್ ಅಂಗೀಕರಿಸುವ ಪ್ರಾಧಿಕಾರವು ಕೆ.ಟಿ.ಟಿ.ಪಿ. ರೂಲ್ಸ್ 2000 ನಿಯಮ 20 ರಡಿ ಸೂಚಿಸಿರುವಂತೆ ಟೆಂಡರ್ ದಸ್ತಾವೇಜುಗಳ ಪರಿಶೀಲನೆ, ಟೆಂಡರ್ ತೆರೆಯುವ ಪ್ರಕ್ರಿಯೆಯ ಮೇಲ್ವಿಚಾರಣೆ, ಸ್ವೀಕೃತ ಟೆಂಡರ್‌ಗಳ ಪ್ರಾಥಮಿಕ ಪರಿಶೀಲನೆ ಹಾಗೂ ಗುತ್ತಿಗೆದಾರರ ಮೌಲ್ಯ ಮಾಪನ ವರದಿಯನ್ನು ಟೆಂಡರ್ ಅಂಗೀಕರಿಸುವ ಪ್ರಾಧಿಕಾರದ ಪರಿಗಣನೆಗೆ ಒಪ್ಪಿಸುವ ಕೆಲಸವನ್ನು ನಿರ್ವಹಿಸಬೇಕಾಗಿದೆ.

ಇದಲ್ಲದೇ, ಗುತ್ತಿಗೆ ಮೊತ್ತ ರೂ.5.00 ಕೋಟಿಗಳಿಗಿಂತ ಹೆಚ್ಚಿಗೆಯಾದಲ್ಲಿ, ಟೆಂಡರ್ ಅಂಗೀಕರಿಸುವ ಪ್ರಾಧಿಕಾರ ಟೆಂಡರ್ ಪರಿಶೀಲನಾ ಸಮಿತಿಯನ್ನು ರಚಿಸುವ ಅಗತ್ಯವಿರುತ್ತದೆ. ಆದ್ದರಿಂದ ಈ ಕೆಳಗಿನಂತೆ ಆದೇಶ ಹೊರಡಿಸಲಾಗಿದೆ.

**ಆದೇಶ**

**ಕ್ರ.ಸಂ. ಸಿಇಎನ್: ತಾಸ-4: ಸಇಂ-2: ಸಂಚಾರಿ ಪೀಠ: 2006-07/ 01588, ದಿನಾಂಕ: 31ನೇ ಮೇ, 2006**

ಮೇಲೆ ಪೀಠಿಕೆಯಲ್ಲಿ ವಿವರಿಸಿರುವಂತೆ, ಗುಲ್ಬರ್ಗಾದಲ್ಲಿ ಕರ್ನಾಟಕ ಹೈಕೋರ್ಟಿನ ಸಂಚಾರಿ ಪೀಠದ ಕಟ್ಟಡ ನಿರ್ಮಾಣದ ಟೆಂಡರ್ ಪ್ರಕ್ರಿಯೆಯನ್ನು ನಿರ್ವಹಿಸಲು ಈ ಕೆಳಗೆ ನಮೂದಿಸಿರುವ ಅಧಿಕಾರಿಗಳನ್ನೊಳಗೊಂಡ ಟೆಂಡರ್ ಪರಿಶೀಲನಾ ಸಮಿತಿಯನ್ನು ರಚಿಸಲಾಗಿದೆ.

| | | |
|---|---|---|
| 1. | ಶ್ರೀ ಜಿ. ಚಂದ್ರಮೌಳಿ ನಾಯಕ<br>ಅಧೀಕ್ಷಕರ ಇಂಜಿನೀಯರರು, ಲೋಕೋಪಯೋಗಿ ಇಲಾಖೆ ವೃತ್ತ, ಗುಲ್ಬರ್ಗಾ. | ಅಧ್ಯಕ್ಷರು |
| 2. | ಶ್ರೀ ನಾಗಶೆಟ್ಟಿ ಅಕ್ಕಾ<br>ಕಾರ್ಯನಿರ್ವಾಹಕ ಇಂಜಿನೀಯರರು, ಲೋಕೋಪಯೋಗಿ ಇಲಾಖೆ ವಿಭಾಗ, ಗುಲ್ಬರ್ಗಾ. | ಸದಸ್ಯರು ಕಾರ್ಯದರ್ಶಿಗಳು |
| 3. | ಶ್ರೀ ಎಂ.ಎನ್. ರಾಮಚಂದ್ರ,<br>ಉಪಮುಖ್ಯ ಇಂಜಿನೀಯರರು-2, ಕೇಂದ್ರ ಕಾರ್ಯಾಲಯ, ಧಾರವಾಡ. | ಸದಸ್ಯರು |
| 4. | ಶ್ರೀ ಜಿ.ಎಸ್. ನಾರಾಯಣಮೂರ್ತಿ,<br>ಉಪಮುಖ್ಯ ಇಂಜಿನೀಯರರು-1, ಕೇಂದ್ರ ಕಾರ್ಯಾಲಯ, ಧಾರವಾಡ. | ಸದಸ್ಯರು |

| | | |
|---|---|---|
| 5. | ಶ್ರೀ ಸಿ.ಆರ್. ಬಳ್ಳಾರಿ,<br>ಕಾರ್ಯನಿರ್ವಾಹಕ ಇಂಜಿನೀಯರರು,<br>ಲೋಕೋಪಯೋಗಿ ಇಲಾಖೆ ವಿಭಾಗ, ಹಾವೇರಿ. | ಸದಸ್ಯರು |
| 6. | ಶ್ರೀ ಬಿ.ಎಸ್. ಪಠಾಣ,<br>ಲೆಕ್ಕಾಧಿಕಾರಿಗಳು, ಕೇಂದ್ರ ಕಾರ್ಯಾಲಯ, ಧಾರವಾಡ. | ಸದಸ್ಯರು |
| 7. | ಶ್ರೀ ವ್ಹಿ.ಆರ್. ಕುಕನೂರ್,<br>ತಾಂತ್ರಿಕ ಸಹಾಯಕರು, ಕೇಂದ್ರ ಕಾರ್ಯಾಲಯ, ಧಾರವಾಡ. | ಸದಸ್ಯರು |

ಮುಖ್ಯ ಇಂಜಿನೀಯರರು,
ಪಿ.ಆರ್.928 ಸಂಪರ್ಕ ಮತ್ತು ಕಟ್ಟಡ (ಉತ್ತರ), ಧಾರವಾಡ.

## ನಿರ್ದೇಶಕರು, ಗಣಿ ಮತ್ತು ಭೂವಿಜ್ಞಾನ ಇಲಾಖೆ, ಬೆಂಗಳೂರು ರವರ ನಡವಳಿಗಳು

**ವಿಷಯ:** ಬೆಂಗಳೂರು ಗ್ರಾಮಾಂತರ ಜಿಲ್ಲೆ, ಕನಕಪುರ ತಾಲ್ಲೂಕು, ತಾಮಸಂದ್ರ ಗ್ರಾಮದಲ್ಲಿ ಮಲ್ಟಿಕಲರ್ ಗ್ರಾನೈಟ್‌ಗಾಗಿ ಶ್ರೀ ಕೆ. ಶ್ರೀನಿವಾಸರವರಿಗೆ ಮಂಜೂರಾಗಿದ್ದ ಕಲ್ಲು ಗಣಿ ಗುತ್ತಿಗೆ ಸಂಖ್ಯೆ: 309ರ ಗುತ್ತಿಗೆಯನ್ನು ರದ್ದುಗೊಳಿಸುವ ಬಗ್ಗೆ.

**ಉಲ್ಲೇಖ:** (1) ಕೇಂದ್ರ ಕಛೇರಿ ಪತ್ರ ಸಂಖ್ಯೆ: ಗಭೂಇ:ಡಿಸಿಬಿ: ಕಗಗು 309: 2005-06, 3093-95, ದಿನಾಂಕ: 01.08.2005.
(2) ಉಪ ನಿರ್ದೇಶಕರು, ಕನಕಪುರ ರವರ ಪತ್ರ ಸಂಖ್ಯೆ: ಗಭೂಇ: ಉನಿಕ: ಕಗಗು 309: 2005-06: 3000 ದಿನಾಂಕ: 16.06.2005.
(3) ಈ ಕಛೇರಿ ಆದೇಶ ಸಂಖ್ಯೆ: ಗಭೂಇ: ಡಿಸಿಬಿ: ಕಗಗು 309: 2005-06, 15510-18, ದಿನಾಂಕ: 23.03.2006.

**ಪ್ರಸ್ತಾವನೆ:**

ಬೆಂಗಳೂರು ಗ್ರಾಮಾಂತರ ಜಿಲ್ಲೆ, ಕನಕಪುರ ತಾಲ್ಲೂಕು, ತಾಮಸಂದ್ರ ಗ್ರಾಮದ ಸರ್ವೆ ನಂ.84ರಲ್ಲಿ ಶ್ರೀ ಕೆ. ಶ್ರೀನಿವಾಸರವರಿಗೆ 3.10 ಎಕರೆಗೆ ದಿನಾಂಕ: 26.04.2000 ರಿಂದ 10 ವರ್ಷಗಳಿಗಾಗಿ ಕಲ್ಲು ಗಣಿ ಗುತ್ತಿಗೆ ಮಂಜೂರು ಮಾಡಲಾಗಿತ್ತು. ಉಲ್ಲೇಖಿಸಿರುವ ಕಛೇರಿ ಪತ್ರದಲ್ಲಿ ಗುತ್ತಿಗೆದಾರರಿಗೆ ನಿಯಮಾನುಸಾರ ಸೂಚನಾ ಪತ್ರ ನೀಡಿ 2004ರ ಮಾರ್ಚ್ ಅಂತ್ಯದವರೆಗೆ ಬಾಕಿ ರೂ.65,005/- ಗಳನ್ನು ಪಾವತಿಸುವಂತೆ ತಿಳಿಸಲಾಗಿತ್ತು.

ಗಣಿ ಮತ್ತು ಭೂ ವಿಜ್ಞಾನ ಇಲಾಖೆಯ ನಿರ್ದೇಶಕರ ಗಮನಕ್ಕೆ ಬಂದಂತೆ ಗುತ್ತಿಗೆದಾರರು ಮೇಲಿನ ಉಲ್ಲೇಖಿತ ಪತ್ರ 1ರ ಅಂತಿಮ ನೋಟೀಸಿಗೆ ಯಾವ ರೀತಿಯೂ ಸ್ಪಂದಿಸಿರುವುದಿಲ್ಲವಾದ ಕಾರಣ ಹಾಗೂ ಉಲ್ಲೇಖಿತ ಪತ್ರದ 2ರಲ್ಲಿ ತಿಳಿಸಿದಂತೆ ಬಾಕಿ ಪಾವತಿಸದ ಕಾರಣ ಕರ್ನಾಟಕ ಉಪ ಖನಿಜ ರಿಯಾಯಿತಿ ನಿಯಮ 1994ರ ನಿಯಮ 39ರಂತೆ ಸರ್ಕಾರದ ಅಧಿಸೂಚನೆ-III ಸಂಖ್ಯೆ: ಸಿಐ 418 ಎಂಆರ್‌ಸಿ 92 ದಿನಾಂಕ: 02.07.1994ರಲ್ಲಿ ಪ್ರತ್ಯಾಯೋಜಿಸಿರುವ ಅಧಿಕಾರದಂತೆ ಗುತ್ತಿಗೆಯನ್ನು ರದ್ದುಪಡಿಸಬೇಕಾಗಿರುತ್ತದೆ. ಅದರಂತೆ ಮೇಲ್ಕಂಡ ಉಲ್ಲೇಖಿತ 3ರ ಆದೇಶದಲ್ಲಿ ಕಲ್ಲುಗಣಿ ಗುತ್ತಿಗೆಯನ್ನು ಕೆ.ಎಂ.ಎಂ.ಸಿ.ಆರ್. ನಿಯಮ 1994ರ ನಿಯಮ 39 ರಡಿಯಲ್ಲಿ ರದ್ದುಗೊಳಿಸಲಾಗಿತ್ತು. ಆದರೆ ಗುತ್ತಿಗೆದಾರರು ಬಾಕಿಯನ್ನು ಪೂರ್ಣ ಸಂದಾಯ ಮಾಡಿರುವುದಾಗಿ ದಿನಾಂಕ: 25.03.2006ರ ಪತ್ರದಲ್ಲಿ ತಿಳಿಸಿರುವುದರಿಂದ ಈ ಕೆಳಗಿನಂತೆ ಆದೇಶ ಮಾಡಲಾಗಿದೆ.

### ಆದೇಶ

### ಸಂಖ್ಯೆ: ಗಭೂಇ: ಡಿಸಿಬಿ: ಕಗಗು: 309: 06-07: 2997, ದಿನಾಂಕ: 2ನೇ ಜೂನ್, 2006

ಈ ಕಛೇರಿಯಿಂದ ಜಾರಿ ಮಾಡಲಾದ ರದ್ದಿತಿಯ ಆದೇಶವು ಕೆ.ಎಂ.ಎಂ.ಸಿ.ಆರ್. 1994ರ ನಿಯಮ 55ರ ಅಡಿಯಲ್ಲಿ ಈಗಾಗಲೇ ಮಾಡಿರುವ ನ್ಯೂನತೆಗಳನ್ನು ಸರಿಪಡಿಸಿ ರದ್ದಾದ ಆದೇಶವನ್ನು ನಿರ್ದೇಶಕರು, ಗಣಿ ಮತ್ತು ಭೂ ವಿಜ್ಞಾನ ಇಲಾಖೆ, ಇವರಿಗೆ ಪ್ರತ್ಯಾಯೋಜಿಸಿರುವ ಅಧಿಕಾರದಡಿಯಲ್ಲಿ ಹಿಂತೆಗೆದುಕೊಳ್ಳಲಾಗಿದೆ.

ನಿರ್ದೇಶಕರು,
ಪಿ.ಆರ್.929 ಗಣಿ ಮತ್ತು ಭೂವಿಜ್ಞಾನ ಇಲಾಖೆ, ಬೆಂಗಳೂರು.

## ಕಂದಾಯ ಇಲಾಖೆ

### ಅಧಿಸೂಚನೆ

### ಸಂಖ್ಯೆ: ಕಂಇ 34 ಮುನೋಸೇ (2) 2006, ಬೆಂಗಳೂರು, ದಿನಾಂಕ: 29ನೇ ಮೇ, 2006

ಶ್ರೀ ಎ.ಕೆ. ಮಲ್ಲಯ್ಯ, ನಿವೃತ್ತ ಉಪ ನೋಂದಣಾಧಿಕಾರಿ, ಹಾವೇರಿ ಇವರು ಉಪ ನೋಂದಣಿ ಕಛೇರಿ, ಹಾವೇರಿಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದ ಅವಧಿಯಲ್ಲಿ ನಡೆಯಿತೆನ್ನಲಾದ ಅವ್ಯವಹಾರ ಕುರಿತು ಸದರಿ ನಿವೃತ್ತ ಅಧಿಕಾರಿಗಳ ವಿರುದ್ಧ ಇಲಾಖಾ ವಿಚಾರಣೆ ನಡೆಸಲು ಕರ್ನಾಟಕ ಸಿವಿಲ್ ಸೇವಾ ನಿಯಮಗಳ ನಿಯಮ 214ರ ಪ್ರಕಾರ ಸರ್ಕಾರ ಅನುಮತಿ ನೀಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಶಿವಲಿಂಗ**
ಪಿ.ಆರ್.930 ಪೀಠಾಧಿಕಾರಿ, ಕಂದಾಯ ಇಲಾಖೆ,
(ನೋಂದಣಿ ಮತ್ತು ಮುದ್ರಾಂಕ).

## ನಿರ್ದೇಶಕರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಬೆಂಗಳೂರು ರವರ ನಡವಳಿಗಳು

**ವಿಷಯ:** ಶ್ರೀಮತಿ ಜಿ. ವಿದ್ಯಾಲಕ್ಷ್ಮಿ, ಕಿರಿಯ ಫಾರ್ಮಾಸಿಸ್ಟ್ ಸಾರ್ವಜನಿಕ ಆಸ್ಪತ್ರೆ, ಹೊಳೆನರಸೀಪುರ ಇವರು ಸರ್ಕಾರಿ ಕೆಲಸಕ್ಕೆ ಅನಧಿಕೃತ ಗೈರು ಹಾಜರಾಗಿರುವ ಬಗ್ಗೆ ಅಂತಿಮ ಆದೇಶ.

**ಉಲ್ಲೇಖ:** (1) ನಿರ್ದೇಶನಾಲಯದ ಅಧಿಕೃತ ಜ್ಞಾಪನಾ ಪತ್ರದ ಸಂಖ್ಯೆ: ಡಿಆರ್‌ಸಿ (2): 15: 03-04.

(2) ಶಸ್ತ್ರ ಚಿಕಿತ್ಸಕರು ಸಾ.ಆ. ಹೊಳೆನರಸೀಪುರ ಇವರ ತಪ್ರದ ಸಂಖ್ಯೆ: ಸಿ(2): 87: 04-05, ದಿನಾಂಕ: 30.03.2005, 18.04.2005, 04.05.2005, 11.07.2005 ಮತ್ತು 11.08.2005.

(3) ಶಸ್ತ್ರ ಚಿಕಿತ್ಸಕರು, ಸಾ.ಆ. ಹೊಳೆನರಸೀಪುರ ಇವರ ಪತ್ರದ ಸಂಖ್ಯೆ: ಸಾಆಹೋ: ಸಿವಿ (2): 37: 05-06, ದಿನಾಂಕ: 19.09.2005.

(4) ಪ್ರಜಾವಾಣಿ ದಿನ ಪತ್ರಿಕೆಯ ಪತ್ರಿಕಾ ಪ್ರಕಟಣೆ ದಿನಾಂಕ: 28.02.2006.

**ಪ್ರಸ್ತಾವನೆ:**

ಶ್ರೀಮತಿ ಜಿ. ವಿದ್ಯಾಲಕ್ಷ್ಮಿ, ಕಿರಿಯ ಫಾರ್ಮಾಸಿಸ್ಟ್, ಸಾರ್ವಜನಿಕ ಆಸ್ಪತ್ರೆ, ಹೊಳೆನರಸೀಪುರ, ಇವರು ನಿರ್ದೇಶನಾಲಯದ ಅಧಿಕೃತ ಜ್ಞಾಪನಾ ಪತ್ರದ ಸಂಖ್ಯೆ: ಡಿಆರ್‌ಸಿ (2):15: 03-04, ದಿನಾಂಕ: 24.01.2005 ರ ಪ್ರಕಾರ ಕಿರಿಯ ಫಾರ್ಮಾಸಿಸ್ಟ್ ಆಗಿ ನೇಮಕಾತಿ ಹೊಂದಿ ಸಾರ್ವಜನಿಕ ಆಸ್ಪತ್ರೆ, ಹೊಳೆನರಸೀಪುರ ಇಲ್ಲಿ ದಿನಾಂಕ: 01.02.2005 ರಂದು ಕರ್ತವ್ಯದ ಮೇಲೆ ಹಾಜರಾಗಿ ದಿನಾಂಕ: 16.03.2005 ರಂದು ಸಾಂದರ್ಭಿಕ ರಜೆಯನ್ನು ಪಡೆದು ನಂತರ ದಿನಾಂಕ: 17.03.2005 ರಿಂದ ಇಲ್ಲಿಯವರೆವಿಗೂ ಕರ್ತವ್ಯಕ್ಕೆ ಅನಧಿಕೃತ ಗೈರು ಹಾಜರಾಗಿದ್ದು, ಇದರಿಂದಾಗಿ ಕರ್ತವ್ಯಕ್ಕೆ ಹಾಜರಾಗುವಾಗ ಕೊಟ್ಟಿರುವ ಘೋಷಣೆ ಪ್ರಕಾರ ನಡೆದುಕೊಳ್ಳದೇ, ಸಾರ್ವಜನಿಕ ಕೆಲಸಕ್ಕೆ ಅಡ್ಡಿ ಪಡಿಸಿದಂತಾಗಿರುತ್ತಾರೆ.

ಅಲ್ಲದೇ ಉಲ್ಲೇಖ (2) ರಲ್ಲಿನ ಪತ್ರಗಳಲ್ಲಿ ಕರ್ತವ್ಯ ಹಾಜರಾಗುವಂತೆ ಅನೇಕ ಬಾರಿ ಮರುಕರೆ ಪತ್ರಗಳನ್ನು ಕಳುಹಿಸಿದಾಗಲೂ ಅಂಚೆವತಿಯಿಂದ ವಿಲೇವಾರಿ ಆಗದೇ ಲಕೋಟೆ ಹಿಂದಕ್ಕೆ ಬಂದಿರುತ್ತದೆ ಹಾಗೂ ಯಾವುದೇ ಲಿಖಿತ ಹೇಳಿಕೆಯನ್ನು ಸಹ ಸಲ್ಲಿಸಿರುವುದಿಲ್ಲ. ಈ ಬಗ್ಗೆ ಅಂತಿಮ ಯತ್ನವಾಗಿ ಉಲ್ಲೇಖ (4)ರಲ್ಲಿ ಪ್ರಜಾವಾಣಿ ದಿನ ಪತ್ರಿಕೆಯಲ್ಲಿ 15 ದಿನಗಳ ಕಾಲಾವಕಾಶವನ್ನು ನೀಡಲಾಗಿದ್ದರೂ ಯಾವುದೇ ಹೇಳಿಕೆಯನ್ನು ಸಹ ಸಲ್ಲಿಸಿರುವುದಿಲ್ಲ. ಖಾಯಂ ಪೂರ್ವ ಸೇವಾವಧಿ ಘೋಷಣೆ ಆಗದೇ ಅನಧಿಕೃತವಾಗಿ ಗೈರು ಹಾಜರಾಗಿರುವುದರಿಂದ ಕರ್ನಾಟಕ ನಾಗರೀಕ ಸೇವಾ (ಪ್ರೊಬೆಷನ್ನರಿ) ನಿಯಮಗಳು 1972ರ ನಿಯಮಗಳ ಅಡಿಯಲ್ಲಿ ಇವರನ್ನು ಸೇವೆಯಿಂದ ತೆಗೆದು ಹಾಕುವಂತಹ ದಂಡನೆಗೆ ಗುರಿಯಾಗಿರುತ್ತಾರೆ. ನೌಕರರು ಗೈರು ಹಾಜರಾಗುವ ಮೂಲಕ ಸಾರ್ವಜನಿಕರಿಗೆ ತೊಂದರೆ ಉಂಟು ಮಾಡಿರುವುದರಿಂದ ಮತ್ತು ಸರ್ಕಾರಿ ಸೇವಾ ನಿಯಮಗಳನ್ನು ಉಲ್ಲಂಘಿಸಿರುವುದರಿಂದ ಸರ್ಕಾರಿ ಸೇವೆಯಲ್ಲಿ ಮುಂದುವರೆಯಲು ಅನರ್ಹರೆಂದು ಸರ್ಕಾರಿ ಸೇವೆಯಿಂದ ತೆಗೆದುಹಾಕಲು ತೀರ್ಮಾನಿಸಿ ಈ ಕೆಳಕಂಡ ಆದೇಶವನ್ನು ಹೊರಡಿಸಿದೆ.

**ಆದೇಶದ ಸಂಖ್ಯೆ: ಡಿಪಿಎನ್ (3): ಸಿಆರ್:16:05-06, ಬೆಂಗಳೂರು, ದಿನಾಂಕ: 23ನೇ ಮೇ, 2006**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಂದ 1957ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳ ಅಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಡಾ: ಎಂ.ಜಿ. ಪ್ರಸಾದ್, ನಿರ್ದೇಶಕರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಬೆಂಗಳೂರು ಆದ ನಾನು ಶ್ರೀಮತಿ ಜಿ. ವಿದ್ಯಾಲಕ್ಷ್ಮಿ, ಕಿರಿಯ ಫಾರ್ಮಾಸಿಸ್ಟ್, ಸಾರ್ವಜನಿಕ ಆಸ್ಪತ್ರೆ, ಹೊಳೆನರಸೀಪುರ, ಇವರು ಖಾಯಂ ಪೂರ್ವಾ ಸೇವಾ ಅವಧಿಯನ್ನು ತೃಪ್ತಿಕರವಾಗಿ ಪೂರೈಸುವ ಮುನ್ನವೇ ಸರ್ಕಾರಿ ಸೇವೆಗೆ ಅನಧಿಕೃತ ಗೈರು ಹಾಜರಾಗಿರುವುದರಿಂದ ಇವರನ್ನು ಕರ್ನಾಟಕ ನಾಗರೀಕ ಸೇವಾ ನಿಯಮ (ಪ್ರೊಬೇಷನ್) ನಿಯಮಗಳು 1977ರ ನಿಯಮ (6) (1) ಮತ್ತು 6 (2)ರ ಪ್ರಕಾರ ಇವರು ಸೇವೆಯಲ್ಲಿ ಮುಂದುವರೆಯಲು ಅನರ್ಹರೆಂದು ಪರಿಗಣಿಸಿ ಈ ಕೂಡಲೇ ಜಾರಿಗೆ ಬರುವಂತೆ ಸರ್ಕಾರಿ ಸೇವೆಯಿಂದ (ಡಿಸ್‌ಚಾರ್ಜ್) ತೆಗೆದು ಹಾಕಿದ್ದೇನೆ.

"ಮಾನ್ಯ ಆಯುಕ್ತರಿಂದ ಅನುಮೋದಿಸಲ್ಪಟ್ಟಿದೆ".

**ಡಾ: ಎಂ.ಜಿ. ಪ್ರಸಾದ್**
ನಿರ್ದೇಶಕರು,
ಆರೋಗ್ಯ ಮತ್ತು ಕು.ಕ. ಸೇವೆಗಳು, ಬೆಂಗಳೂರು.

ಪಿ.ಆರ್.931

## ಅಧಿಕೃತ ಅಧಿಕಾರಿ ಹಾಗೂ ಅಬಕಾರಿ ಅಧೀಕ್ಷಕರು, ಇಐಬಿ ಕೊಡಗು ಜಿಲ್ಲೆ, ಮಡಿಕೇರಿ, ಇವರ ನಡವಳಿಗಳು

**ನಂ.ಇಎಕ್ಸ್‌ಇ: ಡಿಟಿಸಿಆರ್‌ಎಂ: 151/ 2005-06, ದಿನಾಂಕ: 23ನೇ ಮೇ, 2006**

**ಉಪಸ್ಥಿತರು:** ಎನ್.ಎಂ. ಹುಸೇನ್,

ಅಧಿಕೃತ ಅಧಿಕಾರಿ ಹಾಗೂ ಅಬಕಾರಿ ಅಧೀಕ್ಷಕರು ವಿಚಕ್ಷಣದಳ (ಇಐಬಿ), ಕೊಡಗು ಜಿಲ್ಲೆ, ಮಡಿಕೇರಿ.

| **ಫಿರ್ಯಾದುದಾರರು** | ವಿರುದ್ಧ | **ಆರೋಪಿಗಳು** |
|---|---|---|
| ಅಬಕಾರಿ ಉಪ ನಿರೀಕ್ಷಕರು, ಜಾರಿ ಮತ್ತು ತನಿಖೆ, ಸೋಮವಾರಪೇಟೆ. | | ಪತ್ತೆ ಆಗಿರುವುದಿಲ್ಲ. |

**ಪ್ರಕರಣದ ಮುಖ್ಯಾಂಶಗಳು:**

ದಿನಾಂಕ: 23.01.2006 ರಂದು ಅಬಕಾರಿ ಅಧೀಕ್ಷಕರು, ಕೊಡಗು ಜಿಲ್ಲೆ, ಮಡಿಕೇರಿ ರವರ ನಿರ್ದೇಶನದ ಮೇರೆಗೆ ಅಬಕಾರಿ ಉಪ ನಿರೀಕ್ಷಕರು, ಜಾರಿ ಮತ್ತು ತನಿಖೆ, ಸೋಮವಾರಪೇಟೆ ಇವರು ಸಿಬ್ಬಂದಿಯವರೊಂದಿಗೆ ಸೋಮವಾರಪೇಟೆ ತಾಲ್ಲೂಕಿನ ಶನಿವಾರಸಂತೆ ಪಟ್ಟಣದ ಬಳಿ ರಸ್ತೆ ಕಾವಲು ನಡೆಸುತ್ತಿದ್ದಾಗ ದೊರೆತ ಖಚಿತ ವರ್ತಮಾನದ ಮೇರೆಗೆ ಶನಿವಾರಸಂತೆ ಟೌನಿನ ಸಹಕಾರ ಬ್ಯಾಂಕ್‌ನ ಎದುರು ನಿಂತಿದ್ದ ಬಿಳಿಯ ಬಣ್ಣದ ಮಾರುತಿ ಕಾರ್ ಸಂಖ್ಯೆ: ಕೆಎ-12-ಎಂ-3717ರ ವಾಹನ ನಿಂತಿರುವುದು ಕಂಡುಬಂದಿದ್ದು ಯಾರೂ ಪಂಚರು ಸಿಗದ ಕಾರಣ ಸಿಬ್ಬಂದಿಯವರೊಂದಿಗೆ ಅಲ್ಲಿ ನಿಂತಿದ್ದ ಸದರಿ ಕಾರನ್ನು ಪರಿಶೀಲಿಸಲಾಗಿ ಕಾರಿನ ಡೋರನ್ನು ತೆರೆದು ನೋಡಲಾಗಿ ಅದರ ಹಿಂಭಾಗದಲ್ಲಿ ಬಿಳಿಯ ಬಣ್ಣದ ಕ್ಯಾನ್‌ಗಳಿರುವುದು ಕಂಡುಬಂದಿತ್ತು. ಸದರಿ ಮಾರುತಿ ಕಾರು ಸಂಶಯಾಸ್ಪದವಾಗಿ ನಿಂತಿದ್ದು ಕಾರಿನಲ್ಲಿ ಬಿಳಿಯ ಬಣ್ಣದ ಕ್ಯಾನ್‌ಗಳಿರುವುದರಿಂದ ಸದರಿ ಕ್ಯಾನುಗಳನ್ನು ಕಾರಿನಿಂದ ಇಳಿಸಿ, ಎಣಿಸಿ ನೋಡಲಾಗಿ ಒಟ್ಟು 12 ಪ್ಲಾಸ್ಟಿಕ್ ಕ್ಯಾನುಗಳಿದ್ದು ಅಂದಾಜು 35 ಲೀ. ಗಾತ್ರಗಳಾಗಿದ್ದವು. ಮುಚ್ಚಳವನ್ನು ತೆರೆದು ನೋಡಲಾಗಿ ಘಾಟು ವಾಸನೆಯಿಂದ ಕೂಡಿದ ಬಿಳಿಯ ದ್ರವವಿದ್ದು ಅದು ಮದ್ಯಸಾರವೆಂದು ಗುರುತಿಸಲಾಯಿತು. ಈ ರೀತಿಯಾಗಿ ಕ್ಯಾನುಗಳಲ್ಲಿ ಮದ್ಯಸಾರವನ್ನು ತುಂಬಿದ್ದ ಕಾರಿನ ಮಾಲೀಕ ಮತ್ತು ಚಾಲಕನ ಬಗ್ಗೆ ಪರಿಶೀಲಿಸಲಾಗಿ ಸ್ಥಳದಲ್ಲಿ ಯಾರೂ ಇಲ್ಲದ ಬಗ್ಗೆ ಹಾಗೂ ಯಾವ ದಾಖಲಾತಿಗಳು ಕಾರಿನಲ್ಲಿ

ಲಭಿಸದ ಕಾರಣ ಸದರಿ ಕ್ಯಾನುಗಳಿಂದ ರಾಸಾಯನಿಕ ಪರೀಕ್ಷೆಗಾಗಿ 180 ಮಿಲಿನಂತೆ ಒಟ್ಟು 12 ಮಾದರಿ ಸೀಸೆಗಳಿಗೆ ಮದ್ಯಸಾರವನ್ನು ತುಂಬಿಸಿ ಬಾಟಲಿಯ ಮುಚ್ಚಳವನ್ನು ಭದ್ರಪಡಿಸಿ ಬಿಳಿಯ ಬಟ್ಟೆಯಿಂದ ಸುತ್ತಿ ದಾರದ ಸಹಾಯದಿಂದ ಬಿಗಿದು ಇಲಾಖಾ ಮೊಹರಿನಿಂದ ಸೀಲು ಮಾಡಲಾಯಿತು. ಮಾದರಿ ಮೊಹರನ್ನು ಸ್ಥಳದಲ್ಲಿಯೇ ತಯಾರು ಮಾಡಿ ಚೀಟಿಗಳನ್ನು ಬರೆದು ಸಿಬ್ಬಂದಿಯವರ ಸಹಿ ಹಾಕಿಸಲಾಯಿತು. ಸದರಿ ವಾಹನವು 2001ರ ಮಾದರಿಯಾಗಿದ್ದು, ಇದರ ಚಾಸೀಸ್ ಸಂಖ್ಯೆ: SB 308 IN 1513955 ಇಂಜಿನ್ ಸಂಖ್ಯೆ: F 8B 212222 ಆಗಿರುತ್ತದೆ. ಈ ರೀತಿಯಾಗಿ ಮದ್ಯಸಾರವನ್ನು ಅಕ್ರಮ ಸಾಗಾಟ ಮಾಡುತ್ತಿರುವುದು ಅಬಕಾರಿ ಕಾನೂನಿಗೆ ವಿರೋಧವಾಗಿರುವುದರಿಂದ ಮಾರುತಿ ಕಾರು ಸಮೇತ ಒಟ್ಟು 12x 35 ಲೀ. ಮದ್ಯಸಾರ ತುಂಬಿದ ಪ್ಲಾಸ್ಟಿಕ್ ಕ್ಯಾನುಗಳನ್ನು ಸರ್ಕಾರದ ವಶಕ್ಕೆ ತೆಗೆದುಕೊಂಡು ಕಲಂ 11, 14, 32, 34, 43ಎ ರ ಪ್ರಕಾರ ಮೊಕದ್ದಮೆ ಸಂಖ್ಯೆ: 14/ 2005-06, ದಿನಾಂಕ: 23.01.2006 ರಂತೆ ಮೊಕದ್ದಮೆಯನ್ನು ದಾಖಲು ಮಾಡಲಾಯಿತು.

ಸದರಿ ವಶಪಡಿಸಿಕೊಂಡ ಮದ್ಯಸಾರದಿಂದ ಮಾದರಿಯನ್ನು ಮುಖ್ಯ ರಾಸಾಯನಿಕ ತಜ್ಞರು ಮತ್ತು ಸಹಾಯಕ ರಾಸಾಯನಿಕ ಪರಿವೀಕ್ಷಕರು ಕೇಂದ್ರ ರಾಸಾಯನ ಪ್ರಯೋಗಾಲಯ ಬೆಂಗಳೂರು ಇವರಿಗೆ ದಿನಾಂಕ: 07.02.2006ರಂದು ಕಳುಹಿಸಲಾಗಿದ್ದು ಅವರ ವರದಿ ಸಂಖ್ಯೆ: ಸಿಸಿಎಲ್ 490/ 2006 ದಿನಾಂಕ: 07.02.2006ರಲ್ಲಿ ಸದರಿ ಮದ್ಯಸಾರವು 66.4 ಒಪಿ ಮತ್ತು 68.0 ಒಪಿ ಸಾಂದ್ರತೆ ಇರುವುದಾಗಿ ಮತ್ತು ಮಾನವನ ಸೇವನೆಗೆ ಯೋಗ್ಯ ಇರುವುದಾಗಿ ಧೃಢಿಕರಣ ಪತ್ರ ನೀಡಿರುತ್ತಾರೆ. ಸದರಿ ಮದ್ಯಸಾರವನ್ನು ದಿನಾಂಕ: 06.03.2006ರಂದು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ವಿಲೇವಾರಿ ಮಾಡಲಾಗಿರುತ್ತದೆ.

ಸದರಿ ವಾಹನದ ಮಾಲೀಕರನ್ನು ಪತ್ತೆ ಹಚ್ಚಲು ಅಬಕಾರಿ ಉಪ ನಿರೀಕ್ಷಕರು, ಜಾರಿ ಮತ್ತು ತನಿಖೆ, ಸೋಮವಾರಪೇಟೆ ಇವರು ಪ್ರಾದೇಶಿಕ ಸಾರಿಗೆ ಅಧಿಕಾರಿಗಳು, ಬೆಳಗಾಂ ಇವರಿಗೆ ಪತ್ರ ಬರೆದು ವಾಹನದ ಮಾಲೀಕತ್ವವನ್ನು ಕೋರಿರುತ್ತಾರೆ. ಸದರಿ ಪತ್ರಕ್ಕೆ ಉತ್ತರವಾಗಿ ಪ್ರಾದೇಶಿಕ ಸಾರಿಗೆ ಅಧಿಕಾರಿಗಳು, ಬೆಳಗಾಂ ಇವರು ಸದರಿ ವಾಹನಕ್ಕೆ ಸಂಬಂಧಿಸಿದ 'ಬಿ' ಎಕ್ಸ್‌ಟ್ರ್ಯಾಕ್ಟ್ ನೀಡಿದ್ದು ಅದರಲ್ಲಿ ನಮೂದಿಸಿದಂತೆ ಡಾ: ಬಸವರಾಜ್ ವಿರಾಟಯ್ಯ, ಕೂಡ್ಲಿವಾಡ್ ಮಠ, ಅಮೋಘ್, ಪಿ.ಬಿ. ನಂ.436, ಸೆಕ್ಷನ್ ನಂ.3, ಶಿವಬಸವ ನಗರ, ಬೆಳಗಾಂ ಎಂದು ನಮೂದಿಸಿರುತ್ತಾರೆ. ಸದರಿಯವರಿಗೆ ಕರ್ನಾಟಕ ರಾಜ್ಯ ಅಬಕಾರಿ ಕಾಯ್ದೆ 1965ರ ಕಲಂ 43ಬಿ ರ ಪ್ರಕಾರ ಇದೇ ದಿನಾಂಕ: 16.03.2006ರಂದು ಕಾರಣ ಕೇಳಿ ನೋಟೀಸ್ ನೋಂದಣಿ ಅಂಚೆಯ ಮೂಲಕ ನೀಡಲಾಗಿರುತ್ತದೆ. ದಿನಾಂಕ: 27.03.2006ರಂದು ಡಾ: ಬಸವರಾಜ್ ವಿರಾಟಯ್ಯ, ಕೂಡ್ಲಿವಾಡ್ ಮಠ ಇವರು ಕಾರಣ ಕೇಳಿ ನೋಟೀಸಿಗೆ ಉತ್ತರವನ್ನು ನೀಡಿ ಮಾರುತಿ 800 ಕಾರು ಸಂಖ್ಯೆ: ಕೆಎ:22:ಎಂ:3717 ಚಾಸೀಸ್ ಸಂಖ್ಯೆ: SB 308 IN 2005999, ಇಂಜಿನ್ ಸಂಖ್ಯೆ: 3033302 ರ ವಾಹನವು ನನ್ನ ವಶದಲ್ಲಿರುತ್ತದೆ. ನಿಮ್ಮ ಇಲಾಖೆಯಿಂದ ವಶಪಡಿಸಿಕೊಂಡ ವಾಹನಕ್ಕೂ ನನಗೂ ಯಾವುದೇ ಸಂಬಂಧವಿರುವುದಿಲ್ಲ ಎಂಬುವುದಾಗಿ ಉತ್ತರಿಸಿರುತ್ತಾರೆ. ದಿನಾಂಕ: 15.05.2006ರ ಅಬಕಾರಿ ಉಪ ನಿರೀಕ್ಷಕರು, ಜಾರಿ ಮತ್ತು ತನಿಖೆ, ಸೋಮವಾರಪೇಟೆ ರವರು ವರದಿಯನ್ನು ನೀಡಿ ಸದರಿ ವಶಪಡಿಸಿಕೊಂಡ ವಾಹನದ ಇಂಜಿನ್ ಸಂಖ್ಯೆ ಹಾಗೂ ಚಾಸೀಸ್ ಸಂಖ್ಯೆಗೂ ಡಾ: ಬಸವರಾಜ್ ವಿರಾಟಯ್ಯ ರವರ ವಶದಲ್ಲಿರುವ ವಾಹನದ ಇಂಜಿನ್ ಸಂಖ್ಯೆ ಹಾಗೂ ಚಾಸೀಸ್ ಸಂಖ್ಯೆಯನ್ನು ತಾಳೆ ನೋಡಲಾಗಿ ಸಂಖ್ಯೆಗಳಲ್ಲಿ ವ್ಯತ್ಯಾಸ ಕಂಡುಬಂದಿದ್ದು ಈ ದಿನಾಂಕದವರೆಗೂ ವಾಹನದ ಮಾಲೀಕತ್ವದ ಬಗ್ಗೆ ಯಾರೂ ವಾರಸುದಾರರು ತನ್ನದೆಂದು ಕೋರಿ ಅವರಾಗಲೀ ಅವರ ಪರ ವಕೀಲರಾಗಲೀ ಅರ್ಜಿ ಸಲ್ಲಿಸದಿದ್ದ ಕಾರಣ ಸದರಿ ವಾಹನವನ್ನು ಬೋಗಸ್ ಸಂಖ್ಯೆಯ ವಾಹನ ಎಂದು ಪರಿಗಣಿಸಿ ವಾಹನದ ಮಾಲೀಕರು ಅಬಕಾರಿ ಕಾನೂನನ್ನು ತಿಳಿದೇ ಈ ಅಪರಾಧ ಎಸಗಿರುವುದು ಸಾಬೀತಾಗಿರುವುದರಿಂದ ಸದರಿ ವಾಹನವನ್ನು ವಾರಸುದಾರರಿಲ್ಲದ ಸೊತ್ತೆಂದು ಪರಿಗಣಿಸಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಹುದಾಗಿ ಶಿಫಾರಸ್ಸು ಪತ್ರ ನೀಡಿರುತ್ತಾರೆ.

ಕರ್ನಾಟಕ ಅಬಕಾರಿ ಕಾಯಿದೆ 1965ರ ಕಲಂ 43 ರಡಿಯಲ್ಲಿ ಪ್ರಕರಣವನ್ನು ದಾಖಲು ಮಾಡಿದ್ದು ಆರೋಪಿಗಳು ಪತ್ತೆಯಾಗದಿದ್ದಲ್ಲಿ ಅಥವಾ ಪತ್ತೆಯಾಗುವ ಸಾಧ್ಯತೆಗಳು ಇಲ್ಲದಿದ್ದಲ್ಲಿ ಹಾಗೂ ಜಪ್ತು ಮಾಡಲಾದ ವಾಹನವನ್ನು ಜಪ್ತುಪಡಿಸಿದ ಒಂದು ತಿಂಗಳೊಳಗೆ ಯಾವುದೇ ವ್ಯಕ್ತಿಯು ವಾಹನಕ್ಕೆ ಸಂಬಂಧಿಸಿದ ಕಾನೂನುಬದ್ಧವಾದ ದಾಖಲಾತಿಗಳೊಂದಿಗೆ ಮಾಲೀಕತ್ವವನ್ನು ಕೋರಿ ಪ್ರಾಧಿಕಾರದ ಮುಂದೆ ಬಾರದಿದ್ದಲ್ಲಿ ಮತ್ತು ಸದರಿ ಸ್ವತ್ತುಗಳು ಕರ್ನಾಟಕ ಅಬಕಾರಿ ಕಾಯಿದೆ 1965ರ ಕಲಂ 43ಸಿ ರಡಿಯಲ್ಲಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಹುದಾದಂತಹ ಸ್ವತ್ತುಗಳಾಗಿದ್ದಲ್ಲಿ ಅಕ್ರಮ ಮದ್ಯಸಾರ ಸಾಗಾಣಿಕೆಗೆ ದಿನಾಂಕ: 07.08.2005ರಂದು ದಾಖಲಾಗಿರುವ ಅಪರಾಧದಲ್ಲಿ ಬಳಸಿದ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಹುದಾದ ಅಧಿಕಾರ ಈ ಪ್ರಾಧಿಕಾರಕ್ಕೆ ದತ್ತವಾಗಿರುವುದರಿಂದ ಹಾಗೂ ವಾಹನವನ್ನು ಚಾಲನೆಯ ಸ್ಥಿತಿಯಿಲ್ಲದೆ ಹೆಚ್ಚು ಸಮಯ ಇಟ್ಟುಕೊಂಡಲ್ಲಿ ಅದರ ಬಿಡಿಭಾಗಗಳು ತೀರಾ ತುಕ್ಕುಹಿಡಿದು ಹವಾಮಾನದ ವಿಪರೀತ್ಯಕ್ಕೆ ತೀರಾ ಹಾಳಾಗುವ ಸಂಭವ ಇರುವುದರಿಂದ ಹಾಗೂ ಸರ್ಕಾರದ ಆದಾಯದ ಹಿತದೃಷ್ಟಿಯಿಂದ ಸದರಿ ವಾಹನವನ್ನು ವಾರಸುದಾರರಿಲ್ಲದ ಸೊತ್ತೆಂದು ಪರಿಗಣಿಸಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದು ಸೂಕ್ತ ಎಂದು ನಿರ್ಧರಿಸಿ ಈ ಕೆಳಕಂಡ ಆದೇಶ.

## ಆದೇಶ

ಎನ್.ಎಂ. ಹುಸೇನ್, ಅಧಿಕೃತ ಅಧಿಕಾರಿಗಳು ಹಾಗೂ ಅಬಕಾರಿ ಅಧೀಕ್ಷಕರು, ಕೊಡಗು ಜಿಲ್ಲೆ, ಮಡಿಕೇರಿ, ಆದ ನಾನು ಕರ್ನಾಟಕ ಅಬಕಾರಿ ಕಾಯಿದೆ 1965ರ ಕಲಂ 43(ಎ) ನಲ್ಲಿ ದತ್ತವಾದ ಅಧಿಕಾರವನ್ನು ಚಲಾಯಿಸಿ ನಿಯಮ 43(ಬಿ) ರನ್ವಯ ಅನುಸರಿಸಬೇಕಾದ ಕ್ರಮಗಳನ್ನು ಜರುಗಿಸಿ ಆರಕ್ಷಕ ಉಪ ನಿರೀಕ್ಷಕರು, ಜಾರಿ ಮತ್ತು ತನಿಖೆ, ಸೋಮವಾರಪೇಟೆ ಇವರ ಮೊಕದ್ದಮೆ ಸಂಖ್ಯೆ:14/ 2005-06, ದಿನಾಂಕ:23.01.2006ರಂದು ವಶಪಡಿಸಿಕೊಂಡ ಮಾರುತಿ ಕಾರು ಸಂಖ್ಯೆ: ಕೆಎ:22:ಎಂ:3717, ಚಾಸೀಸ್ ಸಂಖ್ಯೆ:SB 308 IN 1513955 ಇಂಜಿನ್ ಸಂಖ್ಯೆ: F 8B 212222 ರನ್ನು ಕರ್ನಾಟಕ ಅಬಕಾರಿ ಕಾಯಿದೆ ಕಲಂ 43ಸಿ ಅನ್ವಯ ವಾರಸುದಾರರಿಲ್ಲದ ಸೊತ್ತೆಂದು ಪರಿಗಣಿಸಿ ಕರ್ನಾಟಕ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶ ನೀಡಿರುತ್ತೇನೆ.

ಮುಟ್ಟುಗೋಲು ಹಾಕಿಕೊಳ್ಳಲಾಗಿರುವ ವಾಹನವನ್ನು 30 ದಿನಗಳು ಕಳೆದ ನಂತರ ಕರ್ನಾಟಕ ಅಬಕಾರಿ (ಮುಟ್ಟುಗೋಲು ಸ್ವತ್ತುಗಳ ವಿಲೇವಾರಿ) ನಿಯಮಗಳ 1967ರ ಅನುಸಾರ ಬಹಿರಂಗ ಹರಾಜು ಮೂಲಕ ವಿಲೇಗೊಳಿಸಲು ಆದೇಶಿಸಿದೆ.

ಈ ಆದೇಶ ಇಂದು ಅಂದರೆ 23.05.2006ರಂದು ಬೆರಳಚ್ಚು ಮಾಡಿ ಬೆರಳಚ್ಚು ಮಾಡಿದ ಪ್ರತಿಯನ್ನು ತಿದ್ದಿ ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು. ಈ ಆದೇಶ ಇಂದಿನಿಂದ 30 ದಿವಸಗಳ ನಂತರ ಜಾರಿಗೆ ಬರುವುದು.

ಅಧಿಕೃತ ಅಧಿಕಾರಿ ಹಾಗೂ ಅಬಕಾರಿ
ಅಧೀಕ್ಷಕರು, ಕೊಡಗು ಜಿಲ್ಲೆ, ಮಡಿಕೇರಿ.

ಪಿ.ಆರ್.933

## ಜಿಲ್ಲಾಧಿಕಾರಿಗಳ ಕಛೇರಿ, ಹಿಂದುಳಿದ ವರ್ಗಗಳ ಮತ್ತು ಅಲ್ಪಸಂಖ್ಯಾತರ ಇಲಾಖೆ, ಶಿವಮೊಗ್ಗ

### ಪತ್ರಿಕಾ ಪ್ರಕಟಣೆ

### ಸಂಖ್ಯೆ: ಬಿಸಿಎಂ: ಕಾಪತ: ಸಿಆರ್ 11:06-07, ದಿನಾಂಕ:3ನೇ ಜೂನ್, 2006

**ವಿಷಯ:** 2006-07ನೇ ಸಾಲಿನಲ್ಲಿ ಹಿಂದುಳಿದ ವರ್ಗಕ್ಕೆ ಸೇರಿದ ಕಾನೂನು ಪದವೀಧರರಿಂದ ತರಬೇತಿಗಾಗಿ ಅರ್ಜಿ ಆಹ್ವಾನಿಸುವ ಬಗ್ಗೆ.

**ಉಲ್ಲೇಖ:** (1) ಸರ್ಕಾರಿ ಆದೇಶ ಸಂಖ್ಯೆ: ಎಸ್‌ಡಬ್ಲ್ಯೂಎಲ್:68: ಎಸ್‌ಡಬ್ಲ್ಯೂಡಿ: 89 ದಿನಾಂಕ: 02.11.1990.
(2) ಸರ್ಕಾರಿ ಆದೇಶ ಸಂಖ್ಯೆ: ಎಸ್‌ಡಬ್ಲ್ಯೂಡಿ: 150: ಬಿಸಿಎ 94, ದಿನಾಂಕ: 17.09.1994.
(3) ಸರ್ಕಾರದ ಆದೇಶ ಸಂಖ್ಯೆ: ಸಕಇ 446: ಬಿಎಂಎಸ್ 2005, ಬೆಂಗಳೂರು ದಿನಾಂಕ: 01.12.2005.

**ಪ್ರಸ್ತಾವನೆ:**

ಶಿವಮೊಗ್ಗ ಜಿಲ್ಲೆಯಲ್ಲಿರುವ ಹಿಂದುಳಿದ ವರ್ಗಗಳಿಗೆ ಸೇರಿದ ಕಾನೂನು ಪದವೀಧರರಿಗೆ 2006-07ನೇ ಸಾಲಿನಲ್ಲಿ ಹಿಂದುಳಿದ ವರ್ಗಗಳ ಮತ್ತು ಅಲ್ಪಸಂಖ್ಯಾತರ ಇಲಾಖಾ ವತಿಯಿಂದ ತರಬೇತಿಯನ್ನು ನೀಡಲು ಅರ್ಜಿಯನ್ನು ಆಹ್ವಾನಿಸಲಾಗಿದೆ. ತರಬೇತಿಗಾಗಿ ಅರ್ಜಿಯನ್ನು ಸಲ್ಲಿಸುವ ಅಭ್ಯರ್ಥಿಗಳು ಈ ಕೆಳಕಂಡ ನಿಬಂಧನೆಗೊಳಪಟ್ಟಿರಬೇಕು.

**ನಿಬಂಧನೆಗಳು**

1. ಸರ್ಕಾರಿ ಆದೇಶ ಸಂಖ್ಯೆ: ಸಕಇ 225: ಬಿಸಿಎ 2000 ಬೆಂಗಳೂರು ದಿನಾಂಕ: 30.03.2002 ರನ್ವಯ ವಿದ್ಯಾರ್ಥಿಗಳು ಪ್ರವರ್ಗ-I, ಪ್ರವರ್ಗ-II (ಎ), ಪ್ರವರ್ಗ-II (ಬಿ), ಪ್ರವರ್ಗ-III (ಎ) ಮತ್ತು III (ಬಿ) ಗೆ ಸೇರಿದವರಾಗಿರಬೇಕು.
2. ಸರ್ಕಾರದ ಆದೇಶ ಸಂಖ್ಯೆ: ಸಕಇ 446: ಬಿಎಂಎಸ್. 2005 ಬೆಂಗಳೂರು ದಿನಾಂಕ: 01.12.2005 ಆದೇಶದಲ್ಲಿ ಶೇಕಡವಾರು ಪ್ರವರ್ಗ-I ರಲ್ಲಿ 2 ಅಭ್ಯರ್ಥಿಗಳನ್ನು ಆಯ್ಕೆ ಮಾಡಿ ಉಳಿದ ವರ್ಗಗಳಲ್ಲಿ ನಿಯಮಾನುಸಾರ 8 ಅಭ್ಯರ್ಥಿಗಳು ಒಟ್ಟು 10 ಅಭ್ಯರ್ಥಿಗಳನ್ನು ಆಯ್ಕೆ ಮಾಡಲಾಗುವುದು.
3. ಅರ್ಜಿಯನ್ನು ಸ್ವೀಕರಿಸುವ ಕೊನೆಯ ದಿನಾಂಕಕ್ಕೆ ಅಭ್ಯರ್ಥಿಯು ಅಡ್ವೋಕೇಟ್ ಆಗಿ ಕಾರ್ಯನಿರ್ವಹಿಸಲು ನಿಗದಿಪಡಿಸಲಾದ ಕಾನೂನು ಪರೀಕ್ಷೆಯಲ್ಲಿ ತೇರ್ಗಡೆಯಾಗಿ 2 ವರ್ಷ ಅವಧಿಯ ಒಳಗಿರುವವರು ಮಾತ್ರ ತರಬೇತಿ ಅರ್ಜಿ ಸಲ್ಲಿಸಲು ಅರ್ಹರಾಗಿರುತ್ತಾರೆ.
4. ಕಾನೂನು ತರಬೇತಿಯನ್ನು 4 ವರ್ಷಗಳ ಅವಧಿಯಾಗಿದ್ದು ಮಾಸಿಕ ರೂ. 1000-00ಗಳ ಶಿಷ್ಯವೇತನ ನೀಡಲಾಗುವುದು.
5. ಕಾನೂನು ತರಬೇತಿಯನ್ನು ಶಿವಮೊಗ್ಗ ಜಿಲ್ಲೆಯಿಂದ 10 ಅಭ್ಯರ್ಥಿಗಳಿಗೆ ಮಾತ್ರ ನೀಡಲಾಗುವುದು. 10 ಅಭ್ಯರ್ಥಿಗಳಲ್ಲಿ ಶೇಕಡ 33.33ರಷ್ಟು ಮಹಿಳಾ ಅಭ್ಯರ್ಥಿಗಳನ್ನು ಸಹಾ ಆಯ್ಕೆ ಮಾಡಲಾಗುವುದು. 10 ಅಭ್ಯರ್ಥಿಗಳನ್ನು ಆಯ್ಕೆ ಮಾಡುವ ವರ್ಗವಾರು ವಿವರ ಕೆಳಕಂಡಂತಿದೆ.

| | | |
|---|---|---|
| 1) ಪ್ರವರ್ಗ-I | 15ಶೇ | 2 ಅಭ್ಯರ್ಥಿಗಳು |
| 2) ಪ್ರವರ್ಗ-II (ಎ) | 53ಶೇ | 5 ಅಭ್ಯರ್ಥಿಗಳು |
| 3) ಪ್ರವರ್ಗ-III (ಎ) | 15ಶೇ | 1 ಅಭ್ಯರ್ಥಿ |
| 4) ಪ್ರವರ್ಗ-III (ಬಿ) | 17 | 2 ಅಭ್ಯರ್ಥಿಗಳು |
| | **ಒಟ್ಟು** | **10 ಅಭ್ಯರ್ಥಿಗಳು** |

6. ಅಭ್ಯರ್ಥಿಯ ಗರಿಷ್ಠ ವಯೋಮಿತಿಯು 30 ವರ್ಷದೊಳಗಿರಬೇಕು ಹಾಗೂ ಪ್ರವರ್ಗ-I ರ ಅಭ್ಯರ್ಥಿಗಳಿಗೆ ಒಂದು ವರ್ಷ ರಿಯಾಯಿತಿ ಇರುತ್ತದೆ.
7. ತರಬೇತಿಯ ಅವಧಿಯ ಮಧ್ಯಭಾಗದಲ್ಲಿ ತರಬೇತಿಗೆ ಗೈರುಹಾಜರಾದಲ್ಲಿ ಪಡೆಯಲಾಗಿರುವ ಶಿಷ್ಯವೇತನದ ಹಣವನ್ನು ಬಡ್ಡಿಯೊಂದಿಗೆ ಹಿಂದಿರುಗಿಸಬೇಕಾಗುವುದು.
8. ಪ್ರವರ್ಗ-I ನ್ನು ಹೊರತುಪಡಿಸಿ ಇತರೆ ಪ್ರವರ್ಗಗಳಿಗೆ ಸೇರಿದ ಅಭ್ಯರ್ಥಿಗಳಿಗೆ 1500-00 ಗಳ ವಾರ್ಷಿಕ ಆದಾಯದ ಮಿತಿಯನ್ನು ನಿಗದಿಪಡಿಸಲಾಗಿದೆ.
9. ಅಭ್ಯರ್ಥಿಯು ತಮ್ಮ ಹೆಸರನ್ನು ಬಾರ್ ಕೌನ್ಸಿಲ್‌ನಲ್ಲಿ ನೋಂದಾಯಿಸಿರಬೇಕು.
10. ಆಯ್ಕೆಯಾದ ಅಭ್ಯರ್ಥಿಗಳನ್ನು ಜಿಲ್ಲಾ ಸಮಿತಿಯ ಜಿಲ್ಲಾ ಪಬ್ಲಿಕ್ ಪ್ರಾಸಿಕ್ಯೂಟರ್ ಸರ್ಕಾರಿ ವಕೀಲರು ಅಥವಾ ಕನಿಷ್ಠ 20 ವರ್ಷಗಳ ವೃತ್ತಿಯಲ್ಲಿ ಅನುಭವ ವಕೀಲರ ಅಧೀನದಲ್ಲಿ ತರಬೇತಿ ಪಡೆಯುವುದು.
11. ಅರ್ಜಿಯನ್ನು ಸ್ವೀಕರಿಸುವ ಕೊನೆಯ ದಿನಾಂಕ: 10.07.2006.
12. ಅಪೂರ್ಣವಾದ ಹಾಗೂ ಕೊನೆಯ ದಿನಾಂಕದ ನಂತರ ಬಂದ ಅರ್ಜಿಯನ್ನು ಯಾವುದೇ ಮುನ್ಸೂಚನೆ ಇಲ್ಲದೇ ತಿರಸ್ಕರಿಸಲಾಗುವುದು.
13. ಆಯ್ಕೆಯು ಅನುದಾನ ಲಭ್ಯತೆಯ ಷರತ್ತಿಗೊಳಪಟ್ಟಿರುತ್ತದೆ.

ಹೆಚ್ಚಿನ ವಿವರಗಳಿಗೆ ಅರ್ಜಿ ನಮೂನೆಯನ್ನು ಜಿಲ್ಲಾ ಅಧಿಕಾರಿಗಳ ಕಛೇರಿ, ಹಿಂದುಳಿದ ವರ್ಗಗಳ ಮತ್ತು ಅಲ್ಪಸಂಖ್ಯಾತರ ಇಲಾಖೆ, ರವೀಂದ್ರನಗರ, 100 ಅಡಿರಸ್ತೆ, ಶಿವಮೊಗ್ಗ ಜಿಲ್ಲೆ, ಕಛೇರಿ ವೇಳೆಯಲ್ಲಿ ಪಡೆಯಬಹುದಾಗಿದೆ.

ಜಿಲ್ಲಾ ಅಧಿಕಾರಿಗಳು,
ಪಿ.ಆರ್.932 ಹಿಂದುಳಿದ ವರ್ಗಗಳ ಮತ್ತು ಅಲ್ಪಸಂಖ್ಯಾತರ ಇಲಾಖೆ, ಶಿವಮೊಗ್ಗ.

## ವಾಣಿಜ್ಯ ತೆರಿಗೆ ಜಂಟಿ ಆಯುಕ್ತರ ಕಛೇರಿ, (ಆಡಳಿತ) ಡಿ.ವಿ.ಓ., ಧಾರವಾಡ ವಿಭಾಗ, ಧಾರವಾಡ

### ಸಂಖ್ಯೆ: ಜೆಸಿಸಿಟಿ:ಡಿ.ವ್ಹಿ.ಓ.ಧಾ: ಲೀಗಲ್:06-07: ಬಿ-311/ 06-07, ದಿನಾಂಕ:24ನೇ ಏಪ್ರಿಲ್, 2006

**ವಿಷಯ:** ಕ.ಮೌ.ತೆ. ಕಾಯ್ದೆ-03-ಮೆ: ಕುಂತಲ್ ಗ್ರಾನೈಟ್ಸ್ ಪ್ರೈ. ಲಿಮಿಟೆಡ್, ಧಾರವಾಡ ಇವರು 'ಸಿ' ನಮೂನೆಗಳನ್ನು ಕಳೆದುಕೊಂಡಿರುವ ಕುರಿತು.

**ಉಲ್ಲೇಖ:** (1) ಎಲ್.ವಿ.ಓ. -310, ಧಾರವಾಡ ಇವರ ಪತ್ರ ಸಂಖ್ಯೆ: ಎಲ್.ವಿ.ಓ. 310/ ಧಾ/ 05-06/ ದಿನಾಂಕ: 22.02.2006.
(2) ಎಲ್.ವಿ.ಓ. -310, ಧಾರವಾಡ ಇವರ ಪತ್ರ ಸಂಖ್ಯೆ: ಎಲ್.ವಿ.ಓ. -310, ಧಾ/ 06-07, ದಿನಾಂಕ:20.04.2006.

ಮೆ: ಕುಂತಲ್ ಗ್ರಾನೈಟ್ಸ್ ಪ್ರೈ. ಲಿಮಿಟೆಡ್, ಧಾರವಾಡ ಇವರು ಕ.ಮೌ.ತೆ. ಕಾಯ್ದೆ ಅಡಿ ನೋಂದಣಿ ಪಡೆದ ವರ್ತಕರಾಗಿದ್ದು (ಟಿನ್-2937035410) ಗ್ರಾನೈಟ್ಸ್ ರಫ್ತು ವಹಿವಾಟು ಮಾಡುತ್ತಿದ್ದಾರೆ. ಸದರಿ ವರ್ತಕರ ಕಡತವು ಎಲ್.ವಿ.ಓ. -310 ಕಛೇರಿಯಲ್ಲಿದ್ದು, ಸದರಿ ಕಛೇರಿಯಿಂದ ದಿನಾಂಕ: 03.02.2006ರಂದು 30 'ಸಿ' ಫಾರ್ಮಗಳನ್ನು (ಅ.ಸಂ. ಟಿಸಿಕೆ 1550285 ಯಿಂದ ಟಿಸಿಕೆ 1550314) ಪಡೆದುಕೊಂಡಿರುವುದಾಗಿ ಸದರಿ ಕಛೇರಿಯ ಅಧಿಕಾರಿಗಳು ತಿಳಿಸಿರುತ್ತಾರೆ. ವರ್ತಕರು ಈ ಎಲ್ಲ 'ಸಿ' ಫಾರ್ಮಗಳನ್ನು (Blank) ಕಳೆದುಕೊಂಡಿರುವುದಾಗಿ ದಿನಾಂಕ: 21.02.2006ರಂದು ಎಲ್.ವಿ.ಓ-310 ಕಛೇರಿಗೆ ತಿಳಿಸಿರುತ್ತಾರೆ. ವಿದ್ಯಾನಗರ ಪೊಲೀಸ್ ಸ್ಟೇಷನ್ ಗೆ ದಿನಾಂಕ: 16.02.2006ರಂದು ದೂರು ನೀಡಿರುತ್ತಾರೆ ಮತ್ತು ದಿನಾಂಕ: 17.02.2006ರಂದು ಸಂಯುಕ್ತ ಕರ್ನಾಟಕ ಪತ್ರಿಕೆಯಲ್ಲಿ ಜಾಹೀರಾತು ನೀಡಿರುತ್ತಾರೆ.

ವರ್ತಕರು ಕೇಂದ್ರ ಮಾರಾಟ ತೆರಿಗೆ ಕಾಯ್ದೆ ಕಲಂ 12(2) ಅನ್ವಯ ರೂ.2,97,510-00 Indemnity bond ಸಲ್ಲಿಸಿರುತ್ತಾರೆ. ಕೇಂದ್ರ ಮಾರಾಟ ತೆರಿಗೆ (ಕರ್ನಾಟಕ) ನಿಯಮ 6(ಇ) ಅನ್ವಯ ದಿನಪತ್ರಿಕೆಯಲ್ಲಿ ಜಾಹೀರಾತು ನೀಡಿದ್ದು, ನಿಯಮ 6(h)(i) ಅನ್ವಯ Official Gazetteನಲ್ಲಿ ಪ್ರಕಟಣೆಗೊಳಿಸಲು ಮತ್ತು ಮುಂದಿನ ಕ್ರಮಕ್ಕಾಗಿ ಅಡಕಗಳೊಂದಿಗೆ ಸಲ್ಲಿಸಲಾಗಿದೆ.

ವಾಣಿಜ್ಯ ತೆರಿಗೆಗಳ ಜಂಟಿ ಆಯುಕ್ತರು
(ಆಡಳಿತ), ಡಿ.ವಿ.ಓ.,
ಧಾರವಾಡ ವಿಭಾಗ, ಧಾರವಾಡ.

ಪಿ.ಆರ್.934

## ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ಚಿತ್ರದುರ್ಗ ವಿಭಾಗ, ಚಿತ್ರದುರ್ಗ ಇವರ ಪ್ರಾಧಿಕಾರ

**ಉಪಸ್ಥಿತರು:** ಶ್ರೀ ಎಸ್. ಮುತ್ತಯ್ಯ, ಭಾಅಸೇ.,
ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ಚಿತ್ರದುರ್ಗ.

| **ಫಿರ್ಯಾದುದಾರರು** | **ವಿರುದ್ಧ** | **ಅಪರಾಧಿಗಳು** |
|---|---|---|
| ಪೊಲೀಸ್ ಸಬ್ ಇನ್ಸ್‌ಪೆಕ್ಟರ್, ಹಿರಿಯೂರು ಪೊಲೀಸ್ ಸ್ಟೇಷನ್, ಹಿರಿಯೂರು. | | -ಇಲ್ಲ- |

**ವಾಹನದ ವಾರಸುದಾರರು:** ಶಾಖಾ ವ್ಯವಸ್ಥಾಪಕರು, ದಿ ಓರಿಯೆಂಟಲ್ ಇನ್‌ಶ್ಯೂರೆನ್ಸ್ ಕಂಪನಿ ಲಿಮಿಟೆಡ್, ಬ್ರ್ಯಾಂಚ್ ಆಫೀಸ್, ಶ್ರೀ ಶಾರದಾ ಕಾಂಪ್ಲೆಕ್ಸ್, ಕೆ.ಎಸ್. ಆರ್.ಟಿ.ಸಿ. ಬಸ್ ಸ್ಟ್ಯಾಂಡ್ ಎದುರು ಚಿತ್ರದುರ್ಗ.

**ವಾರಸುದಾರರ ಪರ ವಕೀಲರು:** ಶ್ರೀ ಬಿ.ಎಸ್. ಚಂದ್ರಶೇಖರ ಮೂರ್ತಿ ವಕೀಲರು, ಚಿತ್ರದುರ್ಗ.

**ಪ್ರಕರಣದ ಹಿನ್ನೆಲೆ:**

ದಿನಾಂಕ: 26.01.2001ರಂದು ಬೆಳಗಿನ ಜಾವ 5.45 ಸಮಯದಲ್ಲಿ ಹಿರಿಯೂರು ತಾಲ್ಲೂಕು ಹೊಸೂರು ಗ್ರಾಮದ ಬಳಿ ಪೂನಾ - ಬೆಂಗಳೂರು ರಾಷ್ಟ್ರೀಯ ಹೆದ್ದಾರಿ 4ರಲ್ಲಿ ನಿಂತಿದ್ದ ಟಿ.ಎನ್.:28:ಡಿ:1595ರ ಲಾರಿಯ ಹಿಂಭಾಗಕ್ಕೆ ಕೆಎ:18:ಎಂ:248 ಮಹೇಂದ್ರ ಮಾರ್ಶಲ್ ಜೀಪ್‌ಗೆ ಡಿಕ್ಕಿ ಹೊಡೆದು ಅಪಘಾತದಲ್ಲಿ ಇಬ್ಬರು ಗಂಡಸರು ಮೃತಪಟ್ಟಿದ್ದು, ಸದರಿ ಜೀಪಿನಲ್ಲಿ ಅಕ್ರಮವಾಗಿ ಕಳ್ಳಸಾಗಾಣಿಕೆ ಮಾಡಲಾಗುತ್ತಿದ್ದ ಶ್ರೀಗಂಧದ ತುಂಡುಗಳು ದೊರೆತ್ತಿದ್ದವು. ವಿಚಾರಣಾ ಸಮಯದಲ್ಲಿ ವಾಹನದ ನಿಜವಾದ ರಿಜಿಸ್ಟ್ರೇಷನ್ ಸಂಖ್ಯೆ: ಎಂ.ಹೆಚ್.11:ಹೆಚ್:7617 ಎಂದು ತಿಳಿದು ಬಂದಿರುತ್ತದೆ.

ವಾಹನದ ಮಾಲೀಕರ ವಿರುದ್ಧ ಈ ಪ್ರಾಧಿಕಾರದಲ್ಲಿ ಕರ್ನಾಟಕ ಅರಣ್ಯ ಕಾಯ್ದೆ 1963ರ ಸೆಕ್ಷನ್ 71(ಎ) ಪ್ರಕಾರ ವಿಚಾರಣೆ ನಡೆಸಿ ದಿನಾಂಕ: 18.02.2005ರಂದು ತೆರೆದ ಪ್ರಾಧಿಕಾರದಲ್ಲಿ ಎಂ.ಹೆಚ್.11:ಹೆಚ್:7617, ಮಹೇಂದ್ರ ಮಾರ್ಶಲ್ ಜೀಪನ್ನು ಹಾಗೂ ಜೀಪಿನಲ್ಲಿ ಅಕ್ರಮವಾಗಿ ಸಾಗಿಸುತ್ತಿದ್ದ 165 ಕೆ.ಜಿ. ಶ್ರೀಗಂಧವನ್ನು ಸರ್ಕಾರದ ಪರ ಮುಟ್ಟುಗೋಲು ಹಾಕಿಕೊಂಡು ಆದೇಶ ಹೊರಡಿಸಲಾಗಿತ್ತು.

ಮೇಲ್ಕಂಡ ಈ ಪ್ರಾಧಿಕಾರದ ಆದೇಶದ ವಿರುದ್ಧ ವಾಹನದ ವಾರಸುದಾರರು ಚಿತ್ರದುರ್ಗ ಜಿಲ್ಲೆಯ ಮಾನ್ಯ ಅಡಿಶನಲ್ ಜಡ್ಜ್ ಮತ್ತು ಶೀಘ್ರ ವಿಲೇವಾರಿ ನ್ಯಾಯಾಲಯದಲ್ಲಿ ದಾವೆಯನ್ನು ದಾಖಲಿಸಿದ ಪ್ರಯುಕ್ತ ಮಾನ್ಯ ನ್ಯಾಯಾಲಯವು ದಿನಾಂಕ: 19.10.2005ರ ತನ್ನ ಆದೇಶದಲ್ಲಿ ಈ ಪ್ರಾಧಿಕಾರವು ಮುಟ್ಟುಗೋಲು ಆದೇಶವನ್ನು ಹೊರಡಿಸಿರುವ ಮುನ್ನ ವಾರಸುದಾರರಿಗೆ ಸೂಕ್ತ ಸಮಯಾವಕಾಶವನ್ನು ನೀಡಿರುವುದಿಲ್ಲ ಎಂಬ ಕಾರಣದ ಮೇಲೆ ವಿಚಾರಣೆಯನ್ನು ಪುನಃ ಪ್ರಾರಂಭಿಸಿ ವಿಚಾರಣೆಯನ್ನು 3 ತಿಂಗಳ ಒಳಗೆ ಮುಗಿಸಿ ಆದೇಶ ನೀಡಬೇಕೆಂದು ನೀಡಿದ ನಿರ್ದೇಶನದ ಮೇರೆಗೆ, ವಾಹನದ ವಾರಸುದಾರರಿಗೆ ಮತ್ತು ಅವರ ಪರ ವಕಾಲತ್ತು ವಹಿಸಿದ ವಕೀಲರಿಗೆ ಈ ಪ್ರಾಧಿಕಾರದ ಮುಂದೆ ಹಾಜರಾಗಿ ತಮ್ಮ ವಾದ ಮಂಡಿಸುವಂತೆ ದಿನಾಂಕ: 21.11.2005, ದಿನಾಂಕ: 29.12.2005 ಮತ್ತು ದಿನಾಂಕ: 06.04.2006ರಂದು ಈ ಪ್ರಾಧಿಕಾರದ ಮುಂದೆ ಹಾಜರಾಗುವಂತೆ ನೋಂದಾಯಿತ ಸ್ವೀಕೃತಿ ಅಂಚೆ ಮೂಲಕ ನೋಟೀಸುಗಳನ್ನು ಜಾರಿ ಮಾಡಲಾಗಿತ್ತು.

ಮೇಲ್ಕಾಣಿಸಿದ ದಿನಾಂಕಗಳಂದು ವಾಹನದ ವಾರಸುದಾರರಾಗಲೀ ಅಥವಾ ಅವರ ಪರ ವಕಾಲತ್ತು ವಹಿಸಿದ ವಕೀಲರಾಗಲೀ ಈ ಪ್ರಾಧಿಕಾರದ ಮುಂದೆ ವಾದ ಮಂಡಿಸಲು ಹಾಜರಾಗಿರುವುದಿಲ್ಲ. ಆದುದರಿಂದ ಈ ಪ್ರಾಧಿಕಾರವು ಸದರಿ ವಿಷಯದ ಬಗ್ಗೆ ವಾಹನದ ವಾರಸುದಾರರು ಯಾವುದೇ ಹೇಳಿಕೆ ನೀಡುವುದು ಇರುವುದಿಲ್ಲವೆಂದು ಭಾವಿಸಿ, ಈ ಕೆಳಗಿನಂತೆ ಆದೇಶ ಹೊರಡಿಸಿದೆ.

### ಆದೇಶ

ಮೇಲ್ಕಂಡ ಎಲ್ಲಾ ಅಂಶಗಳನ್ನು ಪರಿಶೀಲಿಸಿ, ವಾಹನದ ವಾರಸುದಾರರಿಗೆ ಸಾಕಷ್ಟು ಕಾಲಾವಕಾಶ ನೀಡಿದರೂ ಸಹ ಈ ಪ್ರಾಧಿಕಾರದ ಮುಂದೆ ಸದ್ರಿ ವಾರಸುದಾರರು ಬಂದು ತಮ್ಮ ಹೇಳಿಕೆ ನೀಡದೇ ಇರುವುದರಿಂದ, ಸದ್ರಿ ಪ್ರಕರಣದಲ್ಲಿ ದಾಖಲಾಗಿರುವ ದಾಖಲೆ ಹಾಗೂ ಇನ್ನಿತರೆ ಅಂಶಗಳಿಂದ ಈ ಕೆಳಗೆ ಸಹಿ ಮಾಡಿರುವ ಶ್ರೀ ಎಸ್. ಮುತ್ತಯ್ಯ, ಭಾ.ಅ.ಸೇ. ಅಧಿಕೃತ ಅಧಿಕಾರಿ ಹಾಗೂ ಉಪಅರಣ್ಯ ಸಂರಕ್ಷಣಾಧಿಕಾರಿಗಳು, ಚಿತ್ರದುರ್ಗ ವಿಭಾಗ, ಚಿತ್ರದುರ್ಗ ಆದ ನಾನು ಕರ್ನಾಟಕ ಅರಣ್ಯ ಕಾಯ್ದೆ-1963ರ ಸೆಕ್ಷನ್ 71(ಎ)ರ ಪ್ರಕಾರ ಈ ಪ್ರಾಧಿಕಾರದಿಂದ ದಿನಾಂಕ: 18.02.2005ರಂದು ನೀಡಲಾಗಿದ್ದ ಆದೇಶವನ್ನು ಪರಿಪಾಲಿಸಿ ಅನುಸರಿಸಿಕೊಂಡು ಅಮಾನತ್ತುಪಡಿಸಿಕೊಳ್ಳಲಾದ ವಾಹನ ಮಹೇಂದ್ರ ಮಾರ್ಶಲ್ ಜೀಪ್ ಸಂಖ್ಯೆ: ಎಂಹೆಚ್:11:ಹೆಚ್:7617 ಮತ್ತು ಅದರಲ್ಲಿ ಸಾಗಿಸುತ್ತಿದ್ದ 165 ಕೆ.ಜಿ. ಶ್ರೀಗಂಧವನ್ನು ಸರ್ಕಾರದ ಪರವಾಗಿ ಮುಟ್ಟುಗೋಲು ಹಾಕಿಕೊಂಡು ಆದೇಶ ನೀಡಿರುತ್ತೇನೆ. ಸದ್ರಿ ವಾಹನ ಹಾಗೂ ಶ್ರೀಗಂಧವು ಎಲ್ಲಾ ಋಣಭಾರಗಳಿಂದ ಮುಕ್ತವಾಗಿರುತ್ತವೆ ಎಂದು ಘೋಷಿಸಿರುತ್ತೇನೆ. ಈ ಆದೇಶವನ್ನು ದಿನಾಂಕ: 29.05.2006ರಂದು ತೆರೆದ ಪ್ರಾಧಿಕಾರದಲ್ಲಿ ಓದಿ ಹೇಳಲಾಗಿದೆ.

ಈ ಆದೇಶವೇ ಅಂತಿಮ ಆದೇಶವಾಗಿರುತ್ತದೆ.

ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ
ಸಂರಕ್ಷಣಾಧಿಕಾರಿಗಳು,
ಚಿತ್ರದುರ್ಗ ವಿಭಾಗ, ಚಿತ್ರದುರ್ಗ.

ಪಿ.ಆರ್.935

## ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ಚಿತ್ರದುರ್ಗ ವಿಭಾಗ, ಚಿತ್ರದುರ್ಗ ಇವರ ಪ್ರಾಧಿಕಾರ

**ಉಪಸ್ಥಿತರು:** ಶ್ರೀ ಎಸ್. ಮುತ್ತಯ್ಯ, ಭಾಆಸೇ.,
ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ಚಿತ್ರದುರ್ಗ.

**ಫಿರ್ಯಾದುದಾರರು**

ಶ್ರೀ ಜಿ.ಆರ್. ಹಿರೇಮಠ, ಪೊಲೀಸ್ ವೃತ್ತ ನಿರೀಕ್ಷಕರು, ಹಿರಿಯೂರು.

**ವಾಹನದ ವಾರಸುದಾರರು:** ಶ್ರೀ ಕೆ. ರವಿ ಬಿನ್ ಆರ್.ಕೆ. ಕನ್ನಪ್ಪ, ವೇಲುವಿಟಾ, ಜಾನಾಪುರ, 3ನೇ ಕ್ರಾಸ್, ಮಟನ್‌ಸ್ಟಾಲ್ ರಸ್ತೆ, ಭದ್ರಾವತಿ.

**ವಾರಸುದಾರರ ಪರ ವಕೀಲರು:** ಶ್ರೀ ಬಿ.ಕೆ. ರಹಮತ್ತುಲ್ಲಾ, ವಕೀಲರು, ಚಿತ್ರದುರ್ಗ, ಶ್ರೀ ಆರ್. ಮುಸ್ತಾಫ, ವಕೀಲರು, ಗಾಂಧೀ ಸರ್ಕಲ್, ಚಿತ್ರದುರ್ಗ.

**ಪ್ರಕರಣದ ಹಿನ್ನೆಲೆ:**

ದಿನಾಂಕ: 09.01.1997 ರಂದು ಮದ್ಯಾಹ್ನ 2.00 ಗಂಟೆಯಲ್ಲಿ ಹಿರಿಯೂರು ಟೌನ್ ಎನ್.ಹೆಚ್.4 ಬೈಪಾಸ್ ರಸ್ತೆ ನಂ.159/1 ವಿ.ವಿ. ಸಾಗರ ಎಡನಾಲೆಯ ಸೇತುವೆ ಸಮೀಪ ಅಶೋಕ ಲೈಲ್ಯಾಂಡ್ ಲಾರಿ ಸಂಖ್ಯೆ: ಎಂ.ಇ.ಕೆ. 8249ರ ಲಾರಿ ಚಾಲಕ ಅತೀವೇಗ ಹಾಗೂ ಅಜಾಗರೂಕತೆಯಿಂದ ಚಿತ್ರದುರ್ಗದಿಂದ ಬೆಂಗಳೂರು ಕಡೆಗೆ ಹೋಗುವಾಗ ಟಿ.ವಿ.ಎಸ್. 50 ನಂಬರ್: ಸಿಆರ್‌ಯು:953ಕ್ಕೆ ಡಿಕ್ಕಿ ಹೊಡೆದ ಕಾರಣ ಟಿ.ವಿ.ಎಸ್. ಸವಾರ ಅರುಣ್‌ಕುಮಾರ್ ಎಂಬುವರು ಗಾಯಗೊಂಡು ಸ್ಥಳದಲ್ಲೇ ಮೃತಪಟ್ಟಿದ್ದು ಇನ್ನೊಬ್ಬ ಕೆ.ಎ. ರಾಜಯ್ಯಶೆಟ್ಟಿ ಗಾಯಗೊಂಡಿರುತ್ತಾರೆ. ಸದರಿ ಲಾರಿ ಚಾಲಕ ಹಾಗೂ ಕ್ಲೀನರ್ ಹೆದರಿ ಓಡಿಹೋಗಿರುತ್ತಾರೆ. ಪೊಲೀಸ್ ಇಲಾಖೆಯವರು ತನಿಖೆ ನಡೆಸಿದಾಗ ಸದರಿ ಎಂ.ಇ.ಕೆ. 8249 ಲಾರಿಯಲ್ಲಿ 28 ತೇಗದ ಮರದ ತುಂಡುಗಳನ್ನು ಅನಧಿಕೃತವಾಗಿ ಪರವಾನಿಗೆ ಇಲ್ಲದೆ ಕಳ್ಳತನದಿಂದ ಸಾಗಿಸುತ್ತಿದ್ದು ಕಂಡು ಬಂದಿರುತ್ತದೆ.

ನಂತರ ಲಾರಿಯನ್ನು ಪಂಚರ ಸಮಕ್ಷಮ ತಪಾಸಣೆ ಮಾಡಿದಾಗ ಅಪಘಾತ ಮಾಡಿ ಯಾರೂ ವಾರಸುದಾರರು ಇಲ್ಲದೆ ಇರುವ ಎಂ.ಇ.ಕೆ.8249 ಲಾರಿಯ ಬಾಡಿ ಒಳಗಡೆ ತಾಡಪಲ್ ಮುಚ್ಚಿ ಕಳ್ಳ ಸಾಗಾಣಿಕೆ ಮಾಡುತ್ತಿದ್ದ ಮರದ ನಾಟಗಳನ್ನು ಪರಿಶೀಲಿಸಲಾಗಿ ಸದರಿ ತುಂಡುಗಳು ಹಸಿದಾದ ತೇಗದ ಮರದ ತುಂಡುಗಳಾಗಿದ್ದು ಒಂದೊಂದಾಗಿ ಪರಿಶೀಲಿಸಿದಾಗ ಒಟ್ಟು 28 ನಾಟ ಈ ಕೆಳಕಂಡಂತೆ ಉದ್ದ, ದಪ್ಪ ಇರುವುದು ಕಂಡುಬರುತ್ತದೆ. ವಿವರ ಈ ಕೆಳಕಂಡಂತೆ ಇರುತ್ತದೆ.

| ಕ್ರಮ ಸಂಖ್ಯೆ | ಉದ್ದ | ದಪ್ಪ | ತುಂಡುಗಳ ಸಂಖ್ಯೆ |
|---|---|---|---|
| 1. | 6'-10" | 3'-6" | 1 |
| 2. | 7'-0" | 3'-6" | 1 |
| 3. | 7'-5" | 3'-6" | 1 |
| 4. | 7'-3" | 3'-6" | 1 |
| 5. | 6'-5" | 3'-0" | 1 |
| 6. | 4'-2" | 3'-6" | 1 |
| 7. | 6'-8" | 3'-6" | 1 |
| 8. | 4'-8" | 3'-0" | 1 |
| 9. | 7'-8" | 3'-6" | 1 |
| 10. | 6'-0" | 3'-0" | 1 |
| 11. | 7'-0" | 1'-2" | 1 |
| 12. | 7'-0" | 2'-0" | 1 |
| 13. | 7'-6" | 2'-6" | 1 |
| 14. | 6'-0" | 3'-0" | 1 |
| 15. | 7'-6" | 3'-6" | 1 |
| 16. | 7'-0" | 3'-6" | 1 |
| 17. | 5'-0" | 1'-7" | 1 |
| 18. | 6'-0" | 3'-6" | 1 |
| 19. | 5'-9" | 1'-2" | 1 |
| 20. | 7'-0" | 1'-2" | 1 |
| 21. | 7'-0" | 1'-2" | 1 |
| 22. | 7'-0" | 3'-0" | 1 |
| 23. | 5'-9" | 3'-0" | 1 |
| 24. | 7'-0" | 2'-8" | 1 |
| 25. | 7'-0" | 2'-8" | 1 |
| 26. | 5'-10" | 3'-6" | 1 |
| 27. | 6'-6" | 2'-8" | 1 |
| 28. | 7'-0" | 1'-3" | 1 |
| 29. | 1 ತಾಡ್‌ಪಾಲ್ | - | 1 |

ಸದರಿ ತುಂಡುಗಳು ಒಟ್ಟು 28 ತೇಗದ ತುಂಡುಗಳಿದ್ದು ಈ ಪೈಕಿ ಕ್ರಮಸಂಖ್ಯೆ 17ರ ತುಂಡನ್ನು ಸ್ಯಾಂಪಲ್‌ಗಾಗಿ ತೆಗೆದಿರಿಸಿಕೊಂಡು ಮಹಜರ್ ಕ್ರಮವನ್ನು ಕರ್ನಾಟಕ ಅರಣ್ಯ ಕಾಯ್ದೆ-1963ರ ಸೆಕ್ಷನ್ 62ರ ಪ್ರಕಾರ ಎಲ್ಲಾ ವಿಧಿವಿಧಾನಗಳನ್ನು ಅನುಸರಿಸಿ ಜರುಗಿಸಿರುತ್ತಾರೆ. ನಂತರ ವಾಹನವನ್ನು ಮತ್ತು ತೇಗದ ಮರದ ತುಂಡುಗಳನ್ನು ಕರ್ನಾಟಕ ಅರಣ್ಯ ಕಾಯ್ದೆ 1963 ಹಾಗೂ ಸೆಕ್ಷನ್ 52 ಹಾಗೂ 104ರ 379 ಐಪಿಸಿ ರಿತ್ಯಾ ಪೊಲೀಸ್ ಮೊಕದ್ದಮೆ ಸಂಖ್ಯೆ: 15/ 97 ರ ಅನ್ವಯ ಕೇಸುದಾಖಲಿಸಿ, ಪ್ರಥಮ ವರ್ತಮಾನ ವರದಿ, ಸ್ವತ್ತಿನ ಪಟ್ಟಿ ಪಿಎಫ್, ನಂ.10/97 ದಿನಾಂಕ:15.01.1997ರಲ್ಲಿ ಮಾನ್ಯ ನ್ಯಾಯಾಲಯಕ್ಕೆ ಸಲ್ಲಿಸಿರುತ್ತಾರೆ. ಮಹಜರ್ ಕ್ರಮವನ್ನು ದಿನಾಂಕ: 15.01.1997ರ ಬೆಳಿಗ್ಗೆ 7.30 ಗಂಟೆಗೆ ಪ್ರಾರಂಭಿಸಿ 9.00 ಗಂಟೆಯವರೆಗೆ ಜರುಗಿಸಿರುತ್ತಾರೆ.

ನಂತರ ಅಮಾನತ್ತುಪಡಿಸಿಕೊಂಡಿರುವ ಅಶೋಕ್ ಲೈಲ್ಯಾಂಡ್ ಲಾರಿ ಹಾಗೂ ಅದರಲ್ಲಿ ಅಕ್ರಮವಾಗಿ ಸಾಗಿಸುತ್ತಿದ್ದ ತೇಗದ ಮರದ ತುಂಡುಗಳನ್ನು ಈ ಪ್ರಾಧಿಕಾರಕ್ಕೆ ಹಾಜರುಪಡಿಸಿ ಕರ್ನಾಟಕ ಅರಣ್ಯ ಕಾಯ್ದೆ-1963ರ ಸೆಕ್ಷನ್-71(ಎ) ಪ್ರಕಾರ ಮುಂದಿನ ಕ್ರಮ ಜರುಗಿಸುವ ಬಗ್ಗೆ ದಿನಾಂಕ: 15.01.1997ರಲ್ಲಿ ಸಲ್ಲಿಸಿರುತ್ತಾರೆ. ಈ ಪ್ರಾಧಿಕಾರವು ಸದರಿ ಲಾರಿ ಹಾಗೂ ತೇಗದ ತುಂಡುಗಳನ್ನು ತನ್ನ ಸುಪರ್ದಿನಲ್ಲಿಟ್ಟಿಕೊಂಡಿರುವಂತೆ ವಲಯ ಅರಣ್ಯಾಧಿಕಾರಿ, ಚಿತ್ರದುರ್ಗ ವಲಯ, ಚಿತ್ರದುರ್ಗ ಇವರಿಗೆ ವಹಿಸಿದ್ದು, ಸದರಿ ಲಾರಿ ವಾಹನದ ಮಾಲೀಕರ ವಿವರಗಳನ್ನು ತಿಳಿದುಕೊಳ್ಳಲು ಈ ಪ್ರಾಧಿಕಾರವು ಆರ್‌ಟಿಓ ಶಿವಮೊಗ್ಗ ಇವರಿಗೆ ಕೇಳಲಾಗಿ ವಾಹನದ “ಬಿ” ಎಕ್ಸ್‌ಟ್ರಾಕ್ಟ್ ನೀಡಿದ್ದು, ಸದರಿ ವರದಿಯಲ್ಲಿನ ಚಾಸಿ ನಂಬರ್, ಇಂಜಿನ್ ನಂಬರ್‌ಗಳು ಅಮಾನತ್ತು ಪಡಿಸಿಕೊಂಡಿರುವ ವಾಹನದ ಚಾಸಿ ನಂಬರ್, ಇಂಜಿನ್ ನಂಬರ್‌ಗಳಿಗೆ ಹೊಂದಾಣಿಕೆಯಾಗಿರುತ್ತದೆ. ಸದರಿ ವಾಹನದ ಮಾಲೀಕರು ಕೆ. ರವಿ ಬಿನ್ ಕಣ್ಣಪ್ಪ ಜನಾಪುರ 3ನೇ ತಿರುವು ಭದ್ರಾವತಿ ಇವರಿಗೆ ಸೇರಿದ್ದು ಸದರಿ ವಾಹನದ ಮಾಲೀಕರು ಲಾರಿಯನ್ನು ಮಧ್ಯಂತರ ವಶಕ್ಕೆ ನೀಡುವಂತೆ ವಕೀಲರ ಮುಖಾಂತರ ದಿನಾಂಕ: 05.07.1997ರಲ್ಲಿ ಈ ಪ್ರಾಧಿಕಾರಕ್ಕೆ ಅರ್ಜಿಯನ್ನು ಸಲ್ಲಿಸಿದ್ದು, ಅರ್ಜಿಯನ್ನು ಪರಿಶೀಲಿಸಿ ಈ ಪ್ರಾಧಿಕಾರವು ತನ್ನ ಆದೇಶ ದಿನಾಂಕ: 18.11.1997ರಲ್ಲಿ ನಿಬಂಧನೆಗಳಿಗೊಳಪಟ್ಟ ತಾತ್ಕಾಲಿಕವಾಗಿ ಮಾಲೀಕರಾದ ಶ್ರೀ ಕೆ. ರವಿ ಭದ್ರಾವತಿ ಇವರಿಗೆ ಬಿಡುಗಡೆ ಮಾಡಿರುತ್ತದೆ.

ಈ ಪ್ರಕರಣದ ವಿಚಾರಣೆಯನ್ನು ಪ್ರಾರಂಭಿಸಿ ದಿನಾಂಕ: 09.03.1998, 30.03.1998, 20.04.1998, 04.05.1998, 01.06.1998, 22.06.1998, 02.07.1998, 22.09.1998, 14.10.1998, 28.10.1998, 07.11.1998, 11.01.1999, 28.01.1999, 19.02.1999, 10.03.1999, 04.03.1999, 07.04.1999, 28.04.1999, 13.05.1999, 09.06.1999, 16.06.1999, 29.06.1999, 06.07.1999, 27.07.1999, 18.09.1999, 12.10.1999, 26.10.1999, 22.11.1999, 18.04.2000, 02.05.2000, 20.06.2000, 18.07.2000, 27.07.2000, 10.08.2000, 30.08.2000, 13.09.2000, 05.10.2000, 22.11.2000,13.12.2000, 24.01.2001, 23.02.2001, 20.12.2001, 27.07.2004, 10.08.2004, 07.09.2004, 21.09.2004, 14.10.2004, 18.10.2004, 10.11.2004, 30.11.2004, 23.12.2004, 21.01.2005, 24.02.2005, 24.03.2005, 28.04.2005, 26.06.2005, 30.6.2005, 21.07.2005, 25.08.2005, 29.09.2005, 21.10.2005, 24.11.2005, 29.12.2005 ಮತ್ತು 06.04.2006ರಲ್ಲಿ ಪ್ರಕರಣವನ್ನು ವಿಚಾರಣೆಗೆ ಕರೆಯಲಾಯಿತು.

**ಅಭಿಯೋಜನೆ ಪರವಾಗಿ ಸಾಕ್ಷಿಗಳು:**

1. ಶ್ರೀ ಕೆ.ಆರ್. ಮಂಜುನಾಥ್ ಬಿನ್ ಕೆ.ಎ. ರಾಜಯ್ಯ ಶೆಟ್ಟಿ, ವ್ಯಾಪಾರಿ, ದುರ್ಗಿಗುಡಿ ರಸ್ತೆ, ಹಿರಿಯೂರು.
2. ಶ್ರೀ ಡಿ.ಎಂ. ರಾಮಚಂದ್ರ ಶೆಟ್ಟಿ ಬಿನ್ ಲೇಟ್ ಮೇಲಪ್ಪ ಶೆಟ್ಟಿ, ವ್ಯಾಪಾರಿ, ಭಜನಾಮಂದಿರ, 2ನೇ ರಸ್ತೆ, ಹಿರಿಯೂರು.
3. ಶ್ರೀ ಜಿ.ಆರ್. ಹಿರೇಮಠ್ ನಿವೃತ್ತ ಡಿ.ವೈ.ಎಸ್.ಪಿ. ಸಬರ್ಬನ್ ಪೊಲೀಸ್ ಸ್ಟೇಷನ್, ಶ್ರೀನಗರ ಕ್ರಾಸ್, ಧಾರವಾಡ.
4. ಶ್ರೀ ಎ.ಡಿ. ತಿಪ್ಪಯ್ಯ, ಪೊಲೀಸ್ ಸಬ್‌ಇನ್‌ಸ್ಪೆಕ್ಟರ್, ಕೋಟೆ ಸ್ಟೇಷನ್, ಚಿತ್ರದುರ್ಗ.
5. ಶ್ರೀ ಜಾವೀದ್ ಮಮ್ತಾಜ್ ಸಹಾಯಕ ಅರಣ್ಯ ಸಂರಕ್ಷಣಾಧಿಕಾರಿ, ಚಿತ್ರದುರ್ಗ.

**ಪ್ರತಿವಾದಿ (ಅರ್ಜಿದಾರರು) ಪರವಾಗಿ ಸಾಕ್ಷಿಗಳು ಯಾರು ಇಲ್ಲ:**

ಮೇಲ್ಕಂಡ ಸಾಕ್ಷಿದಾರರ ಪೈಕಿ ಕ್ರಮಸಂಖ್ಯೆ: (4)ರ ಸಾಕ್ಷಿದಾರರನ್ನು ಹೊರತುಪಡಿಸಿ ಉಳಿದ ಎಲ್ಲಾ ಸಾಕ್ಷಿದಾರರ ಹೇಳಿಕೆಯನ್ನು ದಾಖಲು ಮಾಡಿಕೊಳ್ಳಲಾಯಿತು. ಅಭಿಯೋಜನೆ ಪರ ಸಾಕ್ಷಿಗಳ ಹೇಳಿಕೆಯನ್ನು ಕೂಲಂಕುಶವಾಗಿ ಪರಿಶೀಲಿಸಿ ಸೂಕ್ತ ನಿರ್ಣಯ ಕೈಗೊಳ್ಳಲು ಈ ಕೆಳಕಂಡ ಅಂಶಗಳನ್ನು ಗಣನೆಗೆ ತೆಗೆದುಕೊಳ್ಳಲಾಗಿದೆ.

**ಅಂಶ-1:** ಈ ಪ್ರಕರಣದಲ್ಲಿ ಅಮಾನತ್ತು ಪಡಿಸಿಕೊಳ್ಳಲಾದ ನಂ. ಎಂ.ಇ.ಕೆ.:8249ರ ಅಶೋಕ ಲೈಲ್ಯಾಂಡ್ ಲಾರಿಯನ್ನು ತೇಗದ ಮರದ ಸಮೇತ ಅಮಾನತ್ತುಪಡಿಸಿಕೊಳ್ಳಲಾಗಿದೆಯೇ? ಅಮಾನತ್ತು ಪಡಿಸುವಾಗ ಕರ್ನಾಟಕ ಅರಣ್ಯ ಕಾಯ್ದೆ 1963ರ ಕಲಂ 62ರ ಪ್ರಕಾರ ಕ್ರಮಬದ್ಧವಾಗಿ ಅಮಾನತ್ತು ಪಡಿಸಲಾಗಿದೆಯೇ?

**ಅಂಶ-2:** ಮಾನತ್ತುಪಡಿಸಿಕೊಂಡ ಲೈಲ್ಯಾಂಡ್ ಲಾರಿಯಲ್ಲಿದ್ದ ತೇಗದ ಮರದ ತುಂಡುಗಳು ಸರ್ಕಾರದ ಸ್ವತ್ತಾದ ತೇಗವೇ.

**ಅಂಶ-3:** ಅಮಾನತ್ತುಪಡಿಸಲಾಗಿರುವ ಲೈಲ್ಯಾಂಡ್ ಲಾರಿಯ ಮಾಲೀಕರು ವಾಹನವನ್ನು ತೇಗದ ಮರದ ಕಳ್ಳಸಾಗಾಣಿಕೆಯಲ್ಲಿ ಭಾಗಿಯಾಗಿರುವುದಿಲ್ಲ ಎನ್ನುವುದನ್ನು ಸಾಬೀತು ಪಡಿಸಿರುವರೆ? ಅಥವಾ ವಾಹನವು ತೇಗದ ಮರದ ಕಳ್ಳಸಾಗಾಣಿಕೆಗೆ ಬಳಕೆಯಾಗದಂತೆ ವಾಹನದ ಮಾಲೀಕರು ಎಲ್ಲಾ ರೀತಿಯ ಮುಂಜಾಗ್ರತಾ ಕ್ರಮ ಕೈಗೊಂಡಿರುವರೇ?

ಮೇಲ್ಕಂಡ ಅಂಶಗಳಿಗೆ ಈ ಕೆಳಗಿನಂತೆ ಉತ್ತರಿಸುತ್ತೇನೆ.

**ಅಂಶ-1:** ಸಕಾರಾತ್ಮಕ

**ಅಂಶ-2:** ಸಕಾರಾತ್ಮಕ

**ಅಂಶ-3:** ನಕಾರಾತ್ಮಕ

ಕಾರಣಗಳನ್ನು ಈ ಕೆಳಗೆ ವಿವರಿಸಲಾಗಿದೆ.

**ಅಂಶ-1:** ಪೊಲೀಸ್ ವೃತ್ತ ನಿರೀಕ್ಷಕರು, ಹಿರಿಯೂರು ಇವರು ತಮ್ಮ ಠಾಣೆ ಗುನ್ನೆ ಸಂಖ್ಯೆ: 15/97 ರಲ್ಲಿ ಕರ್ನಾಟಕ ಅರಣ್ಯ ಕಾಯ್ದೆ-1963 ಗಳ 379 ಐ.ಪಿ.ಸಿ. ಕೇಸಿನಲ್ಲಿ ದಿನಾಂಕ: 09.01.1997ರಂದು ಮಧ್ಯಾಹ್ನ 2.00 ಗಂಟೆ ಸಮಯದಲ್ಲಿ ಹಿರಿಯೂರಿನ ಎನ್.ಹೆಚ್. -4 ಬೈಪಾಸ್ ರಸ್ತೆ ವಿ.ವಿ.ಸಾಗರ ಎಡನಾಲೆಯ ನಂ.159/ 1 ಸೇತುವೆಯ ಬಳಿ ಲೈಲ್ಯಾಂಡ್ ಲಾರಿ ಸಂಖ್ಯೆ: ಎಂ.ಇ.ಕೆ. 8249 ಲಾರಿಯು ಸಿ.ಆರ್.ಯು:953, ಟಿ.ವಿ.ಎಸ್.:50ಕ್ಕೆ ಡಿಕ್ಕಿ ಹೊಡೆದು ಅಪಘಾತ ನಡೆಸಿದಾಗ ಟಿ.ವಿ.ಎಸ್. ಸವಾರರಾದ ಶ್ರೀ ಅರುಣ್‌ಕುಮಾರ ಸ್ಥಳದಲ್ಲೇ ಮೃತಪಟ್ಟಿದ್ದು ಮತ್ತೊಬ್ಬ ಸವಾರ ಕೆ.ಎ. ರಾಜಯ್ಯಶೆಟ್ಟಿ ಗಾಯಗೊಂಡಿದ್ದು ಹಿರಿಯೂರು ಪೊಲೀಸ್ ಠಾಣೆಯಲ್ಲಿ ಮೊಕದ್ದಮೆ ಸಂಖ್ಯೆ: 10/ 97 ಸೆಕ್ಷನ್ 279.337 304(ಎ)

ಐ.ಪಿ.ಸಿ. ರೀತ್ಯಾಕೇಸು ದಾಖಲಿಸಿ ತನಿಖೆ ಕೈಗೊಂಡಾಗ ತನಿಖೆ ಕಾಲಕ್ಕೆ ಅಪಘಾತ ಉಂಟುಮಾಡಿದ ಎಂ.ಇ.ಕೆ. 8249ರ ಲೈಲ್ಯಾಂಡ್ ಲಾರಿಯ ಬಾಡಿಯಲ್ಲಿ 29 ಮರದ ತುಂಡುಗಳು ಇದ್ದವು ಈ ಮರದ ತುಂಡುಗಳ ಬಗ್ಗೆ ಲಾರಿಯ ಚಾಲಕ ಅಥವಾ ಮಾಲೀಕ ಯಾರೂ ಬಾರದೆ ಇದ್ದು ಸದರಿ 28 ತುಂಡುಗಳ ಬಗ್ಗೆ ಲಾರಿಯಲ್ಲಿ ಯಾವುದೇ ದಾಖಲೆಗಳು, ಪರವಾನಗಿಗಳು ಇಲ್ಲದೆ ಇದ್ದು ಅನಧಿಕೃತವಾಗಿ ಕಳ್ಳತನದಿಂದ ಸಾಗಿಸುತ್ತಿದ್ದವುಗಳಾಗಿದ್ದು, ಈ ಲಾರಿಯ ಬಲಭಾಗದ ಚಾಸಿಯ ಮೇಲೆ ಇಂಜಿನ್ ಮತ್ತು ಚಾಸಿ ನಂ. ಎ.ಎಲ್.ಸಿ.ಒ. -3/1, ಎ.ಎಲ್.ಇ.ಇ-150-894 ಮತ್ತು ನಂ.ಎಎಲ್.370/ 44 ಎ.ಎಲ್.ಇಇ-6903 ಇರುತ್ತದೆ.

ಸದರಿ ಲಾರಿಯನ್ನು ದಿನಾಂಕ: 15.01.1997ರಂದು ಬೆಳಿಗ್ಗೆ 7.30 ಗಂಟೆಯಲ್ಲಿ ಪಂಚರ ಸಮಕ್ಷಮ ತಪಾಸಿಸಿ ಸದರಿ ಲಾರಿಯ ಬಾಡಿಯಲ್ಲಿದ್ದ ಮರದ ತುಂಡುಗಳ ಬಗ್ಗೆ ಮರದ ತುಂಡುಗಳು ಕೊಯ್ದ ಹಸಿ ತುಂಡುಗಳಾಗಿತ್ತು. 28 ತುಂಡುಗಳನ್ನು ಉದ್ದ X ದಪ್ಪ ಅಳತೆ ಮಾಡಿ ನಂಬರ್ ಹಾಕಿ ಕ್ರ.ಸಂ.17ರ ತುಂಡನ್ನು ಸ್ಯಾಂಪಲ್ ತುಂಡಾಗಿ ತೆಗೆದಿರಿಸಿ ನಂತರ ಅಮಾನತ್ತುಪಡಿಸಿಕೊಂಡ ಮಾಲನ್ನು ಠಾಣಾ ಮಾಲು ಪಟ್ಟಿ ನಂ.10/97ರಲ್ಲಿ ದಿನಾಂಕ: 14.01.1997ರಂದು ದಾಖಲಿಸಿ ಪ್ರಥಮ ವರ್ತಮಾನ ವರದಿ ಮತ್ತು ಮಾಲುಪಟ್ಟಿ ಸಂಖ್ಯೆ: 10/97ನ್ನು ಮಾನ್ಯ ನ್ಯಾಯಾಲಯಕ್ಕೆ ಸಲ್ಲಿಸಿರುತ್ತಾರೆ.

ಒಟ್ಟಿನಲ್ಲಿ ಲೈಲ್ಯಾಂಡ್ ಲಾರಿಯನ್ನು ಮತ್ತು ತೇಗದ ಮರದ ತುಂಡುಗಳನ್ನು ಅಮಾನತ್ತು ಪಡಿಸುವಾಗ ಮತ್ತು ಮಹಜರ್ ನಡೆಸುವಾಗ ಕಲಂ 62ರ ಕರ್ನಾಟಕ ಅರಣ್ಯ ಕಾಯ್ದೆ-1963ರ ಸೆಕ್ಷನ್-62ರ ಪ್ರಕಾರ ನಿಯಮಗಳನ್ನು ಪಾಲಿಸಿರುತ್ತಾರೆ.

ಸದರಿ ಪ್ರಕರಣವು ಅರಣ್ಯ ಕಾಯ್ದೆಗಳ ಉಲ್ಲಂಘನೆಗೆ ಸಂಬಂಧಪಟ್ಟಿದ್ದರಿಂದ ಮುಂದಿನ ನಡವಳಿಕೆ ನಡೆಸುವ ಬಗ್ಗೆ ವಾಹನ ಮತ್ತು ತೇಗದ ಮರದ ತುಂಡುಗಳನ್ನು ಈ ಪ್ರಾಧಿಕಾರಕ್ಕೆ ಸಲ್ಲಿಸಿರುತ್ತಾರೆ. ಸದರಿ ಅಮಾನತ್ತುಗೊಳಿಸಲಾದ ತೇಗದ ಮರದ ತುಂಡುಗಳನ್ನು ಸಹಾಯಕ ಅರಣ್ಯ ಸಂರಕ್ಷಣಾಧಿಕಾರಿಗಳು, ಚಿತ್ರದುರ್ಗ ಉಪವಿಭಾಗ, ಚಿತ್ರದುರ್ಗ ಇವರು ಪರಿಶೀಲಿಸಿ, ಸದರಿ ಲೈಲ್ಯಾಂಡ್ ಲಾರಿಯಲ್ಲಿ ಸಾಗಿಸುತ್ತಿದ್ದ ನಾಟ ತುಂಡನ್ನು ತೇಗದ ಮರದ್ದೆಂದು ದೃಢೀಕರಿಸಿರುತ್ತಾರೆ.

ಸದರಿ ಲಾರಿಯ ಮಾಲೀಕರು ವಾಹನವನ್ನು ತಮ್ಮ ಮಧ್ಯಂತರ ಬಿಡುಗಡೆಗೆ ದಿನಾಂಕ:05.07.1997ರಂದು ಅರ್ಜಿ ಸಲ್ಲಿಸಿದಾಗ ಸರ್ಕಾರಿ ವಕೀಲರ ಅಭಿಪ್ರಾಯ ಪಡೆದು ಈ ಕೆಳಕಂಡ ನಿಬಂಧನೆಗಳ ಮೇಲೆ ಈ ಪ್ರಾಧಿಕಾರದ ಆದೇಶ ದಿನಾಂಕ: 20.10.1997ರಂದು ಮಧ್ಯಂತರವಾಗಿ ವಾಹನ ಬಿಡುಗಡೆ ಮಾಡಲಾಗಿತ್ತು.

- ರೂ. 1.50 ಲಕ್ಷ ಇಂಡಿಮೆನಿಟಿ ಬಾಂಡ್ ಹಾಗೂ ಅದೇ ಮೊತ್ತಕ್ಕೆ ಜಾಮೀನು.
- ವಾಹನವನ್ನು ಕೇಳಿದಾಗ ಹಾಜರ್‌ಪಡಿಸಬೇಕು.
- ವಾಹನವನ್ನು ಮಾರಾಟಮಾಡಬಾರದು. ಬಣ್ಣ ಬದಲಾಯಿಸಬಾರದು.
- ವಾಹನವನ್ನು ಯಾವುದೇ ಅಕ್ರಮ ಸಾಗಾಣಿಕೆಗೆ ಉಪಯೋಗಿಸಬಾರದು.

ಸದರಿ ವಿಚಾರಣಾ ಸಮಯದಲ್ಲಿ ಲಾರಿಯನ್ನು ಷರತ್ತಿನಂತೆ ಈ ಪ್ರಾಧಿಕಾರದ ಮುಂದೆ ಹಾಜರುಪಡಿಸಲು ವಿಫಲರಾದ ಕಾರಣ ಜಾಮೀನುದಾರರಿಂದ ಬಾಕಿ ಭೂ ಕಂದಾಯ ರೂಪದಲ್ಲಿ ವಸೂಲಿ ಮಾಡಲು ದಿನಾಂಕ: 20.12.2001ರಂದು ಆದೇಶ ಜಾರಿ ಮಾಡಿ ಜಿಲ್ಲಾಧಿಕಾರಿಗಳು, ಚಿತ್ರದುರ್ಗ ಜಿಲ್ಲೆ, ಚಿತ್ರದುರ್ಗ ಇವರನ್ನು ಕಾನೂನು ಕ್ರಮಕೈಗೊಳ್ಳುವ ಬಗ್ಗೆ ಕೋರಲಾಗಿತ್ತು. ಈ ಕ್ರಮವನ್ನು ಪ್ರಶ್ನಿಸಿ ಮಾನ್ಯ ಜಿಲ್ಲಾ ಸೆಕ್ಷನ್ಸ್ ನ್ಯಾಯಾಲಯದ ಚಿತ್ರದುರ್ಗ ಇವರಲ್ಲಿ ದಿನಾಂಕ: 05.02.2002 ರಂದು ವಾಹನದ ಮಾಲೀಕರು ತಡೆಯಾಜ್ಞೆ ಪಡೆದಿದ್ದು ತದನಂತರ ಮಾನ್ಯ ಜಿಲ್ಲಾ ಸೆಷನ್ಸ್ ನ್ಯಾಯಾಲಯವು ತನ್ನ ಆದೇಶ ದಿನಾಂಕ: 21.07.2003ರಲ್ಲಿ ಈ ಪ್ರಾಧಿಕಾರದ ಕ್ರಮವನ್ನು ಎತ್ತಿಹಿಡಿದ ಹಿನ್ನೆಲೆಯಲ್ಲಿ ದಾವೆದಾರರು ಮಾನ್ಯ ಉಚ್ಚ ನ್ಯಾಯಾಲಯದಲ್ಲಿ ದಾವೆಯನ್ನು ದಾಖಲಿಸಿದ್ದು, ಈ ಸಂಬಂಧ ಮಾನ್ಯ ಉಚ್ಚ ನ್ಯಾಯಾಲಯವು ಈ ಪ್ರಾಧಿಕಾರದ ಆದೇಶ ದಿನಾಂಕ: 21.12.2001 ಮತ್ತು ಮಾನ್ಯ ಸೆಷನ್ಸ್ ನ್ಯಾಯಾಲಯ ಚಿತ್ರದುರ್ಗ ಇವರ ಆದೇಶ ದಿನಾಂಕ: 05.02.2002 ಇವುಗಳನ್ನು ತನ್ನ ಆದೇಶ ದಿನಾಂಕ: 01.12.2003ರಲ್ಲಿ ತಡೆಯಾಜ್ಞೆ ನೀಡಿ ತದನಂತರ ಸಿ.ಆರ್.ಪಿ ಸಂಖ್ಯೆ: 1000/ 2003ರ ಆದೇಶ ದಿನಾಂಕ: 27.01.2004ರಲ್ಲಿ ಈ ಕೆಳಗಿನಂತೆ ಆದೇಶ ನೀಡಿ ದಾವೆಯನ್ನು ವಜಾ ಮಾಡಲಾಗಿದೆ.

*"The learned Counsel for the petitioner files ammom with drawing the petition. Heard, perused records in view of the grounds made out the Criminal Revision Petition in dismissed as with drawn with liberty to the petitioner to approach the competent authorities subject to law of limitation."*

ಪ್ರಕರಣದ ವಿಚಾರಣಾ ಸಮಯದಲ್ಲಿ **ಪ್ರಾಸಿಕ್ಯೂಷನ್ ಸಾಕ್ಷಿ-1** ಶ್ರೀ ಕೆ.ಆರ್. ಮಂಜುನಾಥ ಬಿನ್ ಶ್ರೀ ರಾಜಯ್ಯಶೆಟ್ಟಿ, ಹಿರಿಯೂರು ಇವರು ಸ್ಥಳ ಮಹಜರ್ ಸಮಯದಲ್ಲಿ ಹಾಜರಿದ್ದು ಒಂದು ಲಾರಿಯಲ್ಲಿ ಸುಮಾರು 28 ತೇಗದ ಮರದ ತುಂಡುಗಳಿದ್ದು ಅದರ ಮೇಲೆ ತಾಡಪಾಲನ್ನು ಹಾಕಲಾಗಿತ್ತು ಸದರಿ ಲೈಲ್ಯಾಂಡ್ ಲಾರಿ ನಂ.ಎಂ.ಇ.ಕೆ.8249 ಆಗಿದ್ದು, ಸದರಿ ಲಾರಿ ಚಾಲಕರು ಲಾರಿಯಲ್ಲಿ ಇರಲಿಲ್ಲ ಅಲ್ಲಿಂದ ಅವರು ತಪ್ಪಿಸಿಕೊಂಡು ಓಡಿ ಹೋಗಿದ್ದರು. ಪೊಲೀಸ್‌ನವರು ಸ್ಥಳ ಮಹಜರ್ ನಡೆಸಿ ಪ್ರತಿಯೊಂದು ತೇಗದ ಮರದ ತುಂಡುಗಳಿಗೆ ಕ್ರಮಸಂಖ್ಯೆ ಹಾಕಿ ಕಳ್ಳಸಾಗಾಣಿಕೆ ಮಾಡುತ್ತಿದ್ದರಿಂದ ಲಾರಿಯನ್ನು ಅಮಾನತ್ತು ಪಡಿಸಿದರು. ಮಹಜರ್‌ಗೆ ನಾನು ಸಹಿ ಹಾಕಿದ್ದು ಅದರಲ್ಲಿ ನನ್ನ ಸಹಿ ಇದೆ ನಿಶಾನೆ ಪಿ-1 ಎಂದು ಗುರುತಿಸಲಾಗಿದೆ. ಅಮಾನತ್ತು ಪಡಿಸಿದ ಲಾರಿ ಹಾಗೂ ತೇಗದ ಮರದ ತುಂಡುಗಳನ್ನು ನೋಡಿದರೆ ಗುರುತಿಸುತ್ತೇನೆ. ಅವುಗಳನ್ನು 1 ರಿಂದ 28 ಗುರುತಿಸಲಾಗಿದೆ. ಪಾಟೀಸವಾಲು ಅರ್ಜಿದಾರರಾಗಲಿ ಹಾಗೂ ಅವರ ಪರ ವಕೀಲರಾಗಲೀ ಹಾಜರಿರಲಿಲ್ಲವಾದ್ದರಿಂದ ಪಾಟೀಸವಾಲು ಇಲ್ಲವೆಂದು ಪರಿಗಣಿಸಲಾಯಿತು.

**ಪ್ರಾಸಿಕ್ಯೂಷನ್ ಸಾಕ್ಷಿ-2:** ಶ್ರೀ ಜಾವೀದ್ ಮಮ್ತಾಜ್ ಬಿನ್ ಶ್ರೀ ಮಹಮ್ಮದ್ ಇನಾಯ್‌ತುಲ್ಲಾ ಸಹಾಯಕ ಅರಣ್ಯ ಸಂರಕ್ಷಣಾಧಿಕಾರಿ, ಯಲ್ಲಾಪುರ, ಇವರು 1995 ರಿಂದ 2000 ರವರೆಗೆ ಚಿತ್ರದುರ್ಗ, ಉಪವಿಭಾಗದ ಸಹಾಯಕ ಅರಣ್ಯ ಸಂರಕ್ಷಣಾಧಿಕಾರಿಗಳಾಗಿ ಕರ್ತವ್ಯ ನಿರ್ವಹಿಸುತ್ತಿದ್ದು ಈ ಕೇಸಿನಲ್ಲಿ ಅಮಾನತ್ತುಪಡಿಸಿಕೊಂಡು ಚಿತ್ರದುರ್ಗ ಅರಣ್ಯ ಸಂಕೀರ್ಣದ ಆವರಣದಲ್ಲಿದ್ದ 28 ಸಾಗುವಾನಿ ಮರದ ದಿಮ್ಮಿಗಳನ್ನು ದಿನಾಂಕ: 23.06.1997ರಂದು ಪರೀಕ್ಷಿಸಿ ಅವೆಲ್ಲಾ ಸಾಗುವಾನಿ ದಿಮ್ಮಿಗಳೆಂದು ಖಚಿತಪಡಿಸಿಕೊಂಡು ದೃಢೀಕರಣ ಪತ್ರ ನೀಡಿರುತ್ತೇನೆ. ಸದರಿ ಸಾಗುವಾನಿ ಮರದ ದಿಮ್ಮಿಗಳಿಗೆ ಅನುಕ್ರಮವಾಗಿ 1 ರಿಂದ 28 ರವರೆಗೆ ನಂಬರ್‌ಗಳನ್ನು ಕೊಟ್ಟು ಕ್ರಮಸಂಖ್ಯೆ 17ನ್ನು ಮಾದರಿಗಾಗಿ ತೆಗೆದು ಪೊಲೀಸರಿಗೆ ನೀಡಿ ಇನ್ನುಳಿದ 27 ಸಾಗುವಾನಿ ಮರದ ದಿಮ್ಮಿಗಳನ್ನು ಅಳತೆ ಮಾಡಲಾಗಿ 2.845 ಘನ ಮೀಟರ್ ಇದ್ದು ಮೌಲ್ಯ 99,500/- ಎಂಬುದಾಗಿ ಅನುಭವ ಮತ್ತು ತಾಂತ್ರಿಕ ಜ್ಞಾನದಿಂದ ದೃಢೀಕರಿಸಿ, ದೃಢೀಕರಣ ಪತ್ರ ನೀಡಿರುತ್ತೇನೆ. ದೃಢೀಕರಣ ಪತ್ರ ಈಗ ನೋಡಿ ಗುರುತಿಸಿದ್ದು ಅದು ನಿಶಾನೆ ಪಿ-1 ಇರುತ್ತದೆ. ನನ್ನ ಸಹಿ ಪಿ-1ಎ ಇದ್ದು ಸಾಗುವಾನಿ ದಿಮ್ಮಿಗಳನ್ನು ಈಗ ಗುರುತಿಸಬಲ್ಲೆ ಹಾಗೂ ಮಾದರಿಗಾಗಿ ತೆಗೆದ ಸಾಗುವಾನಿ ದಿಮ್ಮಿಯನ್ನು ಈಗ ನೋಡಿ ಗುರುತಿಸಬಲ್ಲೆ ಎಂದು ನುಡಿದರು.

**ಪ್ರಾಸಿಕ್ಯೂಷನ್ ಸಾಕ್ಷಿ-3:** ಶ್ರೀ ಡಿ.ಎಂ. ರಾಮಚಂದ್ರಶೆಟ್ಟಿ ಬಿನ್ ಮೇಲಪ್ಪಶೆಟ್ಟಿ ಹಿರಿಯೂರು ಇವರು ಮಹಜರ್ ಸಾಕ್ಷಿಗಾಗಿ ಕರೆಸಿದ್ದು, ಠಾಣೆ ಸರ್ಕಲ್ ಇನ್‌ಸ್ಪೆಕ್ಟರ್ ಆದ ಶ್ರೀ ಹಿರೇಮಠ್ ರವರು ಅಶೋಕ್ ಲೈಲ್ಯಾಂಡ್ ಲಾರಿಯನ್ನು ತೋರಿಸಿದಾಗ ಲಾರಿಯ ಬಾಡಿ ಮೇಲೆ ತಾಡ್‌ಪಾಲ್ ಹೊದಿಕೆ ಇತ್ತು ಅದನ್ನು ಸರಿಸಿ ಅದರೊಳಗಿದ್ದ ತೇಗದ ಮರದ ತುಂಡುಗಳನ್ನು ತೋರಿಸಿದರು ಪೊಲೀಸ್ ಅಧಿಕಾರಿಗಳು ಉದ್ದ, ದಪ್ಪ ಸುತ್ತಳತೆ ಮಾಡಿ ಕ್ರಮಸಂಖ್ಯೆ ನೀಡಿದರು. ಮತ್ತು ಸ್ಥಳದಲ್ಲಿದ್ದ ಅಶೋಕ ಲೈಲ್ಯಾಂಡ್ ಲಾರಿಯಲ್ಲಿದ್ದ ಒಟ್ಟು 28 ತೇಗದ ಮರದ ತುಂಡು ತಾಡ್‌ಪಾಲನ್ನು ಮಹಜರ್ ಮೂಲಕ ಅಮಾನತ್ತು ಪಡಿಸಿಕೊಳ್ಳಲಾಯಿತು. ಸ್ಥಳದಲ್ಲಿ ಪೊಲೀಸರು ಮಾಡಿದ ಅಮಾನತ್ತು ಮಹಜರನ್ನು ಓದಿಸಿಕೇಳಲಾಗಿದ್ದು, ಅದು ಸತ್ಯವಾಗಿರುತ್ತದೆ. ಅದಕ್ಕೆ ನನ್ನ ರುಜು ಮಾಡಿದ್ದು, ಈಗ ನೋಡಿ ಗುರುತಿಸಿದ್ದು ಮಹಜರ್ ರಿಪೋರ್ಟ್ ನಿಶಾನೆ ಪಿ-1 ಎಂದು ಇದೆ ಅದರಲ್ಲಿ ನನ್ನ ಸಹಿ ನಿಶಾನೆ ಪಿ-1ಬಿ ಇದೆ. ಮಹಜರ್ ಮೂಲಕ ಅಮಾನತ್ತುಪಡಿಸಿಕೊಂಡ ಅಶೋಕ ಲೈಲ್ಯಾಂಡ್ ಲಾರಿ, ತೇಗದ ಮರದ ತುಂಡು ಮತ್ತು ಮಾದರಿಗಾಗಿ ತೆಗೆದ ತುಂಡು ಮತ್ತು ತಾಡ್‌ಪಾಲ್ ಇವುಗಳನ್ನು ನೋಡಿದರೆ ಗುರುತಿಸಬಲ್ಲೆ. ಪ್ರಸ್ತುತ ಲಾರಿ ಸಂಖ್ಯೆ: ಎಂ.ಇ.ಕೆ:8249 ನ್ನು ಮಧ್ಯಂತರ ಬಿಡುಗಡೆಗಾಗಿ ವಾಹನದ ಮಾಲೀಕರು ಅರ್ಜಿ ಸಲ್ಲಿಸಿ ತಮ್ಮ ಸುಪರ್ದಿಗೆ ತೆಗೆದುಕೊಂಡಿದ್ದು ಅದನ್ನು ವಿಚಾರಣಾ ಕಾಲದಲ್ಲಿ ಹಾಜರುಪಡಿಸಲು ತಿಳಿಸಿದಾಗ್ಯೂ ಸಹ ಹಾಜರುಪಡಿಸದೇ ಇರುವುದರಿಂದ, ಸದರಿ ವಾಹನವನ್ನು ವಿಚಾರಣಾ ಕಾಲದಲ್ಲಿ ಮುದ್ದೇ ಮಾಲು ಎಂದು ಗುರುತು ಮಾಡಲು ಆಗಿರುವುದಿಲ್ಲ ಈ ಹಂತದಲ್ಲಿ ಈ ಕೇಸಿನಲ್ಲಿ ಅಮಾನತ್ತುಪಡಿಸಿಕೊಂಡ 28 ತೇಗದ ಮರದ ತುಂಡುಗಳನ್ನು ನೋಡಿ ಗುರುತಿಸಿದ್ದು ಮಾದರಿಗಾಗಿ ತೆಗೆದ ಕ್ರಮ ಸಂಖ್ಯೆ: 17ರ ತುಂಡನ್ನು ಈಗ ನೋಡಿ ಗುರುತಿಸಿರುತ್ತೇನೆ ಎಂದು ಸಾಕ್ಷಿ ನುಡಿದರು.

**ಪ್ರಾಸಿಕ್ಯೂಷನ್ ಸಾಕ್ಷಿ-4:** ಶ್ರೀ ಗುರುಲಿಂಗಯ್ಯ ಬಿನ್ ರಾಚಯ್ಯಸ್ವಾಮಿ ಹಿರೀಮಠ್ ನಿವೃತ್ತ ಎಸಿಪಿ, ಧಾರವಾಡ ಇವರು 1986 ಡಿಸೆಂಬರ್‌ನಿಂದ 1998 ಜುಲೈ ವರೆಗೆ ಹಿರಿಯೂರು ಪೊಲೀಸ್ ವೃತ್ತ ನಿರೀಕ್ಷಕರಾಗಿ ಕಾರ್ಯನಿರ್ವಹಿಸುತ್ತಿದ್ದೇವೆ. ದಿನಾಂಕ: 09.01.1997ರಂದು ಮಧ್ಯಾಹ್ನ 2.00 ಗಂಟೆ ಸಮಯದಲ್ಲಿ ಅಶೋಕ ಲೈಲ್ಯಾಂಡ್ ಲಾರಿ ಸಂಖ್ಯೆ: ಎಂ.ಇ.ಕೆ:8249 ಇದು ಒಬ್ಬ ಟಿ.ವಿ.ಎಸ್. ಸವಾರ ಅರುಣ್‌ಕುಮಾರ್ ಎನ್ನುವರಿಗೆ ಹಿರಿಯೂರು ಬೈಪಾಸ್ ರಸ್ತೆಯಲ್ಲಿ ಅಪಘಾತಮಾಡಿದ್ದರಿಂದ ಅವರು ಸ್ಥಳದಲ್ಲೇ ಮೃತಪಟ್ಟಿದ್ದರಿಂದ ಸದರಿ ವಾಹನದ ಚಾಲಕರ ಮೇಲೆ ಹಿರಿಯೂರು ಠಾಣೆ ಗುನ್ನೆ ನಂ.10/ 97 ಕಲಂ 279, 337 ಐಪಿಸಿ ಅಡಿಯಲ್ಲಿ ಗುನ್ನೆ ದಾಖಲಿಸಿದ್ದು ಸದರಿ ತನಿಖೆ ಸಮಯದಲ್ಲಿ ಅಪಘಾತಕ್ಕೆ ಒಳಪಟ್ಟ ಲಾರಿಯಲ್ಲಿ ಒಟ್ಟು 28 ತೇಗದ ಮರದ ತುಂಡುಗಳಿದ್ದು ಚಾಲಕ ಸ್ಥಳದಲ್ಲಿರದೆ ತಪ್ಪಿಸಿಕೊಂಡು ಓಡಿಹೋಗಿರುತ್ತಾನೆ. 15.01.1997ರ ವರೆಗೆ ಚಾಲಕನಾಗಲೀ ಅಥವಾ ಲಾರಿಯ ಮಾಲೀಕರಾಗಲಿ ಬರದೆ ಇದ್ದುದರಿಂದ ಸದರಿ ಲಾರಿಯಲ್ಲಿದ್ದ ತೇಗದ ಮರದ ತುಂಡುಗಳ ಬಗ್ಗೆ ಅಧಿಕೃತ ದಾಖಲೆ ಸಿಗದೇ ಇದ್ದುದರಿಂದ ಸದರಿ ಲಾರಿಯಲ್ಲಿದ್ದ 28 ತೇಗದ ಮರದ ತುಂಡುಗಳನ್ನು ಚಾಲಕನು ಲಾರಿ ಮಾಲೀಕನ ಜೊತೆ ಸೇರಿಕೊಂಡು ಅನಧಿಕೃತವಾಗಿ ಕಳ್ಳಸಾಗಾಣಿಕೆ ಮಾಡುತ್ತಿದ್ದಾರೆ ಎಂದು ಕಂಡು ಬಂದಿದ್ದರಿಂದ ಪೊಲೀಸ್ ಉಪ ನಿರೀಕ್ಷಕರಿಗೆ ಫಿರ್ಯಾದು ಸಲ್ಲಿಸಿರುತ್ತೇನೆ. ಅದು ಹಿರಿಯೂರು ಪೊಲೀಸ್ ಠಾಣೆ ಗುನ್ನೆ ನಂ.15/ 97 ಕರ್ನಾಟಕ ಅರಣ್ಯ ಕಾಯ್ದೆ-1963ರ ಸೆಕ್ಷನ್ 62.104 ಹಾಗೂ ಸೆಕ್ಷನ್ 379 ಐಪಿಸಿ ಅಡಿಯಲ್ಲಿ ದಾಖಲಾಗಿದೆ. ಸದರಿ ಅಪಘಾತಗೊಂಡ ಲಾರಿ ಎಂ.ಇ.ಕೆ.8249 ರಲ್ಲಿ 28 ತೇಗದ ಮರದ ತುಂಡುಗಳಿದ್ದುದರಿಂದ ಪಂಚರ ಸಮಕ್ಷಮ, ಪಂಚನಾಮೆಯಲ್ಲಿ ನಮೂದಿಸಿ ವಶಪಡಿಸಿಕೊಂಡಿರುತ್ತೇನೆ. ಈ ಬಗ್ಗೆ ಮಾನ್ಯ ನ್ಯಾಯಾಲಯಕ್ಕೆ ಪಿ.ಎಫ್. ನಂ.10/ 97ರಲ್ಲಿ ದಾಖಲಿಸಿ ನಿವೇದಿಸಿಕೊಂಡಿರುತ್ತೇನೆ. 16.01.1997ರಂದು 1 ತೇಗದ ಮರದ ತುಂಡನ್ನು ಸ್ಯಾಂಪಲ್‌ಗಾಗಿ ತೆಗೆದಿರಿಸಿ ಉಳಿದಂತೆ 27 ತುಂಡುಗಳನ್ನು ಹಾಗೂ ಲಾರಿಯನ್ನು ಉಪ ಅರಣ್ಯ ಸಂರಕ್ಷಣಾಧಿಕಾರಿಗಳು ಹಾಗೂ ಅಧಿಕೃತ ಅಧಿಕಾರಿಗೆ ಮುಂದಿನ ವಿಚಾರಣೆಗಾಗಿ ವಹಿಸಿಕೊಟ್ಟಿರುತ್ತೇನೆ. ನಾನು ಕೊಟ್ಟ ದೂರು ನಿಶಾನೆ 3ಪಿ ಇದ್ದು, ಅಮಾನತ್ತು ಪಂಚನಾಮೆ ನಿಶಾನೆ ಪಿ-1 ಎಂದು ಗುರುತಿಸಿದ್ದು ನನ್ನ ಸಹಿ ನಿಶಾನೆ ಪಿ-1(ಸಿ) ಎಂದು ಗುರುತಿಸಿದೆ. ತೇಗದ ಮರದ ತುಂಡುಗಳು ಮುದ್ದೇಮಾಲು 1 ರಿಂದ 28 ಎಂದು ಗುರುತಿಸಿ ಮಾದರಿಗಾಗಿ ತೆಗೆದ ಕ್ರಮಸಂಖ್ಯೆ 17ನ್ನು ಮುದ್ದೇಮಾಲು 17 ಎಂದು ಗುರುತಿಸಿದೆ. ನಾನು ವಶಪಡಿಸಿಕೊಂಡ ಲಾರಿಯನ್ನು ಲಾರಿ ಮಾಲೀಕರಿಗೆ ಮಧ್ಯಂತರ ಬಿಡುಗಡೆ ಆದೇಶ ಮಾಡಲಾಗಿದ್ದು ಸದರಿ ಲಾರಿಯನ್ನು ಪ್ರಾಧಿಕಾರದ ಮುಂದೆ ಹಾಜರುಪಡಿಸದೇ ಇದ್ದುದರಿಂದ ಲಾರಿಯನ್ನು ಗುರುತಿಸಲಾಗಿಲ್ಲ. ಸದರಿ ಲಾರಿಯನ್ನು ಮುದ್ದೇ ಮಾಲು ಎಂದು ಗುರುತಿಸಿಕೊಳ್ಳಲಾಗಿರುವುದಿಲ್ಲ ಎಂದು ಸಾಕ್ಷಿ ನುಡಿದರು.

ಈ ಪ್ರಾಧಿಕಾರದಿಂದ ದಿನಾಂಕ: 20.12.2001ರ ಆದೇಶದಲ್ಲಿ ವಿಚಾರಣೆ ಪೂರ್ಣಗೊಳ್ಳುವವರೆಗೆ ನಿಬಂಧನೆಗೊಳಪಟ್ಟು ಇಂಡಿಮಿನಿಟಿ ಬಾಂಡ್ ಮೇಲೆ ವಾಹನವನ್ನು ಮಾಲೀಕರಾದ ಶ್ರೀ ಕೆ. ರವಿ ಭದ್ರಾವತಿ ಇವರಿಗೆ ತಾತ್ಕಾಲಿಕವಾಗಿ ಬಿಡುಗಡೆ ಮಾಡಲಾಗಿತ್ತು. ಹಾಗೂ ಶ್ರೀ ಬಸಪ್ಪ ಬಿನ್ ಕಾಕಬಾಳು ತಿಮ್ಮಪ್ಪ ಇವರು ಶ್ಯೂರಿಟಿ ಬಾಂಡ್ ನೀಡಿರುತ್ತಾರೆ. ಪ್ರಕರಣದ ವಿಚಾರಣಾ ಸಮಯದಲ್ಲಿ ವಾಹವನ್ನು ಹಾಜರುಪಡಿಸುವುದು ಮುಖ್ಯವಾಗಿದ್ದು ವಿಚಾರಣಾ ದಿನಾಂಕಗಳಲ್ಲಿ ವಾಹನದ ಮಾಲೀಕರು, ಅವರಪರ ವಕೀಲರು ವಾಹನವನ್ನು ಹಾಜರುಪಡಿಸಿರುವುದಿಲ್ಲ. ಹಾಗೂ ವಿಚಾರಣಾ ಸಮಯದಲ್ಲಿ ಈ ಪ್ರಾಧಿಕಾರದ ಮುಂದೆ ವಾಹನದ ಮಾಲೀಕರು ಹಾಗೂ ವಾಹನದ ಜೊತೆಗೆ ಹಾಜರಿರುವಂತೆ ಇಲ್ಲವಾದಲ್ಲಿ ನಿಮ್ಮ ಹೇಳಿಕೆ ಏನೂ ಇಲ್ಲವೆಂದು ಪರಿಗಣಿಸಿ ಮುಂದಿನ ಆದೇಶ ಹೊರಡಿಸಲು ಕ್ರಮಕೈಗೊಳ್ಳಲಾಗುವುದು ಎಂಬುದಾಗಿ ನೋಂದಾಯಿತ ಸ್ವೀಕೃತಿ ಅಂಚೆ ಮೂಲಕ ವಾಹನದ ಮಾಲೀಕರ ಪರ ವಕೀಲರಿಗೆ ದಿನಾಂಕ: 26.06.2005, 30.06.2005, 21.07.2005, 29.09.2005, 20.10.2005, 24.11.2005, 29.12.2005, 14/20.03.2006ರಲ್ಲಿ ನೋಟೀಸ್‌ಗಳನ್ನು ಜಾರಿ ಮಾಡಲಾಗಿದ್ದರೂ ಯಾರೂ ಹಾಜರಿರುವುದಿಲ್ಲದ ಕಾರಣ ಈ ಪ್ರಕರಣದಲ್ಲಿ ವಾಹನದ ಮಾಲೀಕರು ಅವರ ಪರ ವಕೀಲರು ಇವರ ಹೇಳಿಕೆ ಏನೂ ಇಲ್ಲವೆಂದು ಪರಿಗಣಿಸಿದೆ.

ಈ ಸಂಬಂಧ ಸರ್ಕಾರಿ ವಕೀಲರು ಚಿತ್ರದುರ್ಗ ರವರು ತಮ್ಮ ಅಭಿಪ್ರಾಯವನ್ನು ಮಂಡಿಸುತ್ತಾ ಈ ಪ್ರಾಧಿಕಾರದಿಂದ ಈಗಾಗಲೇ ಹಲವಾರು ಬಾರಿ ಕಾಲಾವಕಾಶಗಳನ್ನು ನೀಡಲಾಗಿದ್ದರೂ ಸಹ ವಾಹನದ ಮಾಲೀಕರಾಗಲೀ, ಅವರ ಪರ ವಕಾಲತ್ತು ಸಲ್ಲಿಸಿರುವ ವಕೀಲರಾಗಲೀ, ಶೂರಿಟಿದಾರರಾಗಲೀ ಈ ಪ್ರಾಧಿಕಾರದ ಮುಂದೆ ಹಾಜರಾಗಿ ತಮ್ಮ ಅಹವಾಲು ಹಾಗೂ ದಾಖಲೆಗಳನ್ನು ಸಲ್ಲಿಸಿರುವುದಿಲ್ಲ. ಆದ ಪ್ರಯುಕ್ತ ಈ ಪ್ರಾಧಿಕಾರವು ದಿನಾಂಕ: 18.11.1997ರಂದು ಲಾರಿಯನ್ನು ಅದರ ಮಾಲೀಕರಾದ ಶ್ರೀ ಕೆ. ರವಿ ಇವರಿಗೆ ತಾತ್ಕಾಲಿಕವಾಗಿ ಬಿಡುಗಡೆ ಮಾಡಿದ ಆದೇಶವನ್ನು ಸಹ ರದ್ದುಪಡಿಸಿ ಆದ ಪ್ರಯುಕ್ತ ಕಾನೂನಿನ್ವಯ ಪ್ರಾಧಿಕಾರವು ಮುಂದಿನ ಕ್ರಮಕೈಗೊಳ್ಳಬಹುದೆಂದು ಮತ್ತು ಏಕ ಪಕ್ಷೀಯವಾಗಿ ಪ್ರಕರಣವನ್ನು ಮುಕ್ತಾಯಗೊಳಿಸುವಂತೆ ತಮ್ಮ ವಾದವನ್ನು ಮಂಡಿಸಿರುತ್ತಾರೆ.

**ಅಂಶ-2:** ಪೊಲೀಸ್ ವೃತ್ತ ನಿರೀಕ್ಷಕರು ಹಿರಿಯೂರು ಇವರು ಸದರಿ ಪ್ರಕರಣದಲ್ಲಿ ಅಮಾನತ್ತುಪಡಿಸಿಕೊಂಡ ಮಾಲನ್ನು ಪರಿಶೀಲಿಸಿ ವಶಪಡಿಸಿಕೊಂಡಿರುವ ಮಾಲು ತೇಗದ ಮರ ಎಂದು ದೃಢೀಕರಿಸಿ ಪ್ರಮಾಣಪತ್ರವನ್ನು ಸಹಾಯಕ ಅರಣ್ಯ ಸಂರಕ್ಷಣಾಧಿಕಾರಿಗಳು, ಚಿತ್ರದುರ್ಗ ಸಲ್ಲಿಸಿರುತ್ತಾರೆ. ಸದರಿ ಅಶೋಕ ಲೈಲ್ಯಾಂಡ್ ಲಾರಿಯಲ್ಲಿ ಸಾಗಿಸುತ್ತಿದ್ದ ನಾಟಗಳು ತೇಗದ ಮರದ್ದಾಗಿತ್ತು. ಸದರಿ ತೇಗದ ಮರವು ಸರ್ಕಾರದ ಸ್ವತ್ತಾಗಿದ್ದು ಕರ್ನಾಟಕ ಅರಣ್ಯ ಕಾಯ್ದೆ 1963ರ ಸೆಕ್ಷನ್ **62 ಮತ್ತು 71(ಎ)** ರಡಿಯಲ್ಲಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬೇಕಾಗಿರುತ್ತದೆ.

**ಅಂಶ-3:** ಈ ಪ್ರಕರಣದಲ್ಲಿ ಅಶೋಕ ಲೈಲ್ಯಾಂಡ್ ಲಾರಿ ಸಂಖ್ಯೆ: ಎಂ.ಇ.ಕೆ.8249ರ ಮಾಲೀಕರಾದ ಶ್ರೀ ಕೆ. ರವಿ ಮತ್ತು ಅವರ ಪರ ವಕಾಲತ್ತು ವಹಿಸಿರುವ ವಕೀಲರು ವಿಚಾರಣಾ ಸಮಯದಲ್ಲಿ ವಾಹನವು ತೇಗದ ಮರದ ಅಕ್ರಮ ಕಳ್ಳ ಸಾಗಾಣಿಕೆಯಲ್ಲಿ ತೊಡಗದಂತೆ ಯಾವುದೇ

ರೀತಿಯ ಮುಂಜಾಗ್ರತೆ ಕ್ರಮಗಳನ್ನು ತೆಗೆದುಕೊಂಡಿರುವುದು ಲಭ್ಯವಿರುವ ದಾಖಲೆಗಳನ್ವಯ ಕಂಡು ಬಂದಿರುವುದಿಲ್ಲ ಹಾಗೂ ಯಾವುದೇ ದಾಖಲೆಗಳನ್ನು ಸಹ ಈ ಪ್ರಾಧಿಕಾರದ ಮುಂದೆ ಹಾಜರುಪಡಿಸಿರುವುದಿಲ್ಲ.

ಭಾರತೀಯ ದಂಡ ಸಂಹಿತೆ ಸೆಕ್ಷನ್ 101 ಮತ್ತು 106 ರನ್ವಯ ಮತ್ತು ಕರ್ನಾಟಕ ಅರಣ್ಯ ಕಾಯ್ದೆ 1963ರ ಸೆಕ್ಷನ್ 71(ಇ)(2) ರನ್ವಯ ಸದರಿ ವಾಹನದ ಮಾಲೀಕರಿಗೆ ಅಥವಾ ಅವರ ಏಜಂಟರಿಗೆ ವಾಹನವು ತೇಗದ ಮರದ ಕಳ್ಳ ಸಾಗಾಣಿಕೆಯಲ್ಲಿ ಭಾಗಿಯಾಗಿಲ್ಲ ಎಂಬುದನ್ನು ಸಾಬೀತು ಪಡಿಸುವ ಜವಾಬ್ದಾರಿ ಇರುತ್ತದೆ. ಈ ಪ್ರಕರಣದಲ್ಲಿ ವಾಹನದ ಮಾಲೀಕರು, ಅವರ ಪರ ವಕೀಲರು ವಾಹನದಲ್ಲಿ ತೇಗದಮರದ ಕಳ್ಳ ಸಾಗಾಣಿಕೆಯಲ್ಲಿ ದುರ್ಬಳಕೆಯಾಗದಂತೆ ಸಮರ್ಪಕ ಮುಂಜಾಗ್ರತೆ ಕ್ರಮ ತೆಗೆದುಕೊಂಡಿರುವುದಿಲ್ಲವೆಂದು ದೃಢಪಟ್ಟಿರುತ್ತದೆ ಈ ಪ್ರಾಧಿಕಾರದ ಮುಂದೆ ಹಾಜರಾಗಿ ಅವರ ವಾದವನ್ನು ಮಂಡಿಸಲು ಸಾಕಷ್ಟು ಬಾರಿ ಅವಕಾಶ ನೀಡಿದ್ದರೂ ಸಹ ಸದರಿಯವರು ಪ್ರಾಧಿಕಾರದ ಮುಂದೆ ಹಾಜರಾಗಿ ತಮ್ಮ ವಾದವನ್ನು ಮಂಡಿಸಲು ವಿಫಲರಾಗಿರುತ್ತಾರೆ. ಆದ್ದರಿಂದ ಅಂಶ-3 ನಕಾರಾತ್ಮಕ ಎಂದು ಸಮರ್ಥಿಸಿದೆ.

ಸಹಾಯಕ ಅಭಿಯೋಗ ನಿರ್ದೇಶಕರು ಹಾಗೂ ಸದರಿ ಲಾರಿ ಮಾಲೀಕರ ಪರ ವಕಾಲತ್ತು ವಹಿಸಿದ ವಕೀಲರ ವಾದ, ಪ್ರತಿವಾದಗಳನ್ನು ಆಲಿಸಿದ ನಂತರ ವಾಹನವನ್ನು ಉದ್ದೇಶ ಪೂರ್ವಕವಾಗಿ ತೇಗದ ಮರದ ಕಳ್ಳ ಸಾಗಾಣಿಕೆಯಲ್ಲಿ ಬಳಸಲಾಗಿರುವುದು ಸಾಬೀತಾಗಿರುವುದರಿಂದ ಈ ಕೆಳಗಿನಂತೆ ಆದೇಶ ನೀಡಿದೆ.

**ಆದೇಶ**

ಮೇಲ್ಕಂಡ ಎಲ್ಲಾ ಅಂಶಗಳನ್ನು ಪರಿಶೀಲಿಸಿ ನಾನು ಎಸ್. ಮುತ್ತಯ್ಯ., ಭಾ.ಆ.ಸೇ., ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಚಿತ್ರದುರ್ಗ ವಿಭಾಗ, ಚಿತ್ರದುರ್ಗ ಆದ ನಾನು ದಿನಾಂಕ: 18.11.1997ರಂದು ಲಾರಿಯನ್ನು ಅದರ ಮಾಲೀಕರಾದ ಶ್ರೀ ಕೆ. ರವಿ ಇವರಿಗೆ ತಾತ್ಕಾಲಿಕವಾಗಿ ಬಿಡುಗಡೆ ಮಾಡಿದ ಆದೇಶವನ್ನು ರದ್ದುಪಡಿಸಿದ್ದೇನೆ ಮತ್ತು ಕರ್ನಾಟಕ ಅರಣ್ಯ ಕಾಯ್ದೆ-1963ರ ಸೆಕ್ಷನ್-62 ಹಾಗೂ ಸೆಕ್ಷನ್-71(ಎ) ಪ್ರಕಾರ ಪ್ರಸ್ತುತ ಪ್ರಕರಣದಲ್ಲಿ ಅಮಾನತ್ತು ಪಡಿಸಿಕೊಂಡಿರುವ ಅಶೋಕ ಲೈಲ್ಯಾಂಡ್ ಲಾರಿ ಸಂಖ್ಯೆ: ಎಂ.ಇ.ಕೆ. 8249 ಹಾಗೂ ಅದರಲ್ಲಿ ಅಕ್ರಮವಾಗಿ ಕಳ್ಳ ಸಾಗಾಣಿಕೆ ಮಾಡಲಾಗುತ್ತಿದ್ದ 28 ತೇಗದ ಮರದ (ನಾಟ) ತುಂಡುಗಳನ್ನು ಸರ್ಕಾರದ ಪರವಾಗಿ ಮುಟ್ಟುಗೋಲು ಹಾಕಿಕೊಂಡಿರುತ್ತೇನೆ. ಸದರಿ ವಾಹನ ಮತ್ತು ತೇಗ್ದದ ಮರದ (ನಾಟ) ತುಂಡುಗಳು ಎಲ್ಲಾ ಋಣ ಭಾರಗಳಿಂದ ಮುಕ್ತವಾಗಿರುತ್ತದೆ ಎಂದು ಘೋಷಿಸುತ್ತೇನೆ.

ಈ ಆದೇಶವನ್ನು ದಿನಾಂಕ: 29.05.2006ರಂದು ತೆರೆದ ಪ್ರಾಧಿಕಾರದಲ್ಲಿ ನೀಡಿರುತ್ತೇನೆ. ಈ ಆದೇಶ ಹೊರಡಿಸಿದ 30 (ಮೂವತ್ತು) ದಿನಗಳೊಳಗಾಗಿ ಯಾವುದೇ ಅಹವಾಲು ಸ್ವೀಕೃತವಾಗದಿದ್ದಲ್ಲಿ ಈ ಆದೇಶವೇ ಅಂತಿಮ ಆದೇಶವಾಗಿರುತ್ತದೆ.

ಅಧಿಕೃತ ಅಧಿಕಾರಿ ಹಾಗೂ
ಉಪ ಅರಣ್ಯ ಸಂರಕ್ಷಣಾಧಿಕಾರಿಗಳು,
ಚಿತ್ರದುರ್ಗ ವಿಭಾಗ, ಚಿತ್ರದುರ್ಗ.

ಪಿ.ಆರ್.936

## ಜಿಲ್ಲಾಧಿಕಾರಿಗಳ ಕಾರ್ಯಾಲಯ, ಬೆಂಗಳೂರು ಜಿಲ್ಲೆ, ಬೆಂಗಳೂರು

## ಅಧಿಕೃತ ಜ್ಞಾಪನ ಪತ್ರ

**ಸಂಖ್ಯೆ:ಎಲ್.ಆರ್.ಎಫ್ (ಪೂ) ಸಿಆರ್:03/ 06-07, ಬೆಂಗಳೂರು, ದಿನಾಂಕ:5ನೇ ಜೂನ್, 2006**

**ವಿಷಯ:** ಬೆಂಗಳೂರು ಪೂರ್ವ ತಾಲ್ಲೂಕು, ಬಿದರಹಳ್ಳಿ ಹೋಬಳಿ, ಮೇಡಹಳ್ಳಿ ಗ್ರಾಮದ ಸ.ನಂ.2, 3, 5 ಮತ್ತು 22/ 2ಎ ರಲ್ಲಿನ ಒಟ್ಟು 3-24 ಎಕರೆ/ ಗುಂಟೆ ಜಮೀನನ್ನು ಕರ್ನಾಟಕ ಭೂ ಸುಧಾರಣೆ ಕಾಯ್ದೆ ಕಲಂ 109ರಡಿ ಆಶಾ ನಿವಾಸ್ ಸೋಷಿಯಲ್ ಸರ್ವೀಸ್ ಸೆಂಟರ್‌ರವರು ಕ್ರಯಕ್ಕೆ ಪಡೆಯಲು ಅನುಮತಿ ಕೋರಿರುವ ಬಗ್ಗೆ.

**ಉಲ್ಲೇಖ:** (1) ಸರ್ಕಾರದ ಅಧಿಸೂಚನೆ ಸಂಖ್ಯೆ: ಶಾಇ.47/ ಶಾಸನ/ 2001: ಬೆಂಗಳೂರು ದಿನಾಂಕ: 23.04.2003.
(2) ನಿರ್ದೇಶಕರು, ಆಶಾ ನಿವಾಸ್ ಸೋಷಿಯಲ್ ಸರ್ವೀಸ್ ಸೆಂಟರ್‌ರವರ ಮನವಿ ದಿನಾಂಕ: 15.10.2005.
(3) ಉಪವಿಭಾಗಾಧಿಕಾರಿಗಳು, ಬೆಂಗಳೂರು ಉತ್ತರ ಉಪವಿಭಾಗರವರ ಪತ್ರ ಸಂಖ್ಯೆ: ಎಲ್‌ಆರ್‌ಎಫ್.ಸಿ.ಆರ್:04/ 2005-06, ದಿನಾಂಕ: 01.04. 2006.

ಆಶಾನಿವಾಸ್ ಸೋಷಿಯಲ್ ಸರ್ವೀಸ್ ಸೆಂಟರ್, ನಂ.9, ರಟ್‌ಲ್ಯಾಂಡ್ ಗೇಟ್, 5ನೇ ಬೀದಿ, ಚೆನ್ನೈ-06 ರವರು, ಬೆಂಗಳೂರು ಪೂರ್ವ ತಾಲ್ಲೂಕು, ಬಿದರಹಳ್ಳಿ ಹೋಬಳಿ, ಮೇಡಹಳ್ಳಿ ಗ್ರಾಮದ ಸ.ನಂ.2 ರಲ್ಲಿ 0-05 ಗುಂಟೆ, ಸ.ನಂ.3ರಲ್ಲಿ 1-02 ಎಕರೆ. ಗುಂಟೆ, ಸ.ನಂ.5ರಲ್ಲಿ 2-11 ಎಕರೆ/ ಗುಂಟೆ ಮತ್ತು 22/ 2ಎ ರಲ್ಲಿ 0-03 ಗುಂಟೆ ಒಟ್ಟು 3-24 ಎಕರೆ/ ಗುಂಟೆ ಜಮೀನನ್ನು ಮಕ್ಕಳ ಮತ್ತು ಮಹಿಳಾ ಪುನರ್ವಸತಿ ಕೇಂದ್ರ ನಿರ್ಮಿಸುವ ಉದ್ದೇಶಕ್ಕಾಗಿ ಕರ್ನಾಟಕ ಭೂ ಸುಧಾರಣೆ ಕಾಯ್ದೆ ಕಲಂ 109ರಿಡ ಖರೀದಿಸಲು ನಮೂನೆ-15ಎ ಮಾಡಿರುವ ಬೇಡಿಕೆ ಹಾಗೂ ತಹಶೀಲ್ದಾರ್ ಬೆಂಗಳೂರು ಪೂರ್ವ ತಾಲ್ಲೂಕುರವರ ನಮೂನೆ-15 ಎಎ ರಲ್ಲಿ ನೀಡಿದ ಮಾಹಿತಿ ಅನುಸರಿಸಿ ಉಪವಿಭಾಗಾಧಿಕಾರಿಗಳೂ, ಬೆಂಗಳೂರು ಉತ್ತರ ಉಪವಿಭಾಗ ರವರ ಉಲ್ಲೇಖ (3) ಪತ್ರ ನಂ.ಎಲ್.ಆರ್.ಎಫ್.ಸಿಆರ್. 04/ 05-06, ದಿನಾಂಕ: 01.04.2006ರಲ್ಲಿ ಪ್ರಸ್ತಾಪಿತ ಮೇಡಹಳ್ಳಿ ಗ್ರಾಮದ ಸ.ನಂ.2, 4,5 ಮತ್ತು 22/ 2ಎ ರಲ್ಲಿನ ಒಟ್ಟು 3-24 ಎಕರೆ/ ಗುಂಟೆ ಜಮೀನನ್ನು ಕ್ರಯಕ್ಕೆ ಪಡೆಯಲು ಸದರಿ ಸಂಸ್ಥೆಗೆ ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961, ಕಲಂ 109 (1)(ii) ರಡಿ ಅನುಮತಿ ನೀಡಲು ಶಿಫಾರಸ್ಸು ಮಾಡಿರುತ್ತಾರೆ.

ಸದರಿ ಸಂಸ್ಥೆಯು ರಿಜಿಸ್ಟಾರ್ ಆಫ್ ಸೊಸೈಟೀಸ್, ಡಿಸ್ಟ್ರಿಕ್ ರಿಜಿಸ್ಟ್ರಾರ್ಸ್ ಆಫೀಸ್ ಮದ್ರಾಸ್ ಸೆಂಟ್ರಲ್-18 ರವರ ಕಛೇರಿಯಲ್ಲಿ ದಿನಾಂಕ: 02.04.2002ರಂದು ನೋಂದಾಯಿಸಲ್ಪಟ್ಟಿದೆ. ಪ್ರಶ್ನಿತ ಜಮೀನುಗಳ ಖಾತೆದಾರರೊಂದಿಗೆ ಜಮೀನು ಖರೀದಿಸಲು ಕ್ರಯದ ಕರಾರು ಪತ್ರ ಮಾಡಿಕೊಂಡಿರುತ್ತಾರೆ.

ಪ್ರಸ್ತಾಪಿತ ಜಮೀನು ಪರಿಶಿಷ್ಟ ಜಾತಿ/ ಪರಿಶಿಷ್ಟ ಪಂಗಡ (ಪಿ.ಟಿ.ಸಿ.ಎಲ್.) ಕಾಯ್ದೆ ಕರ್ನಾಟಕ ಭೂ ಮಂಜೂರಾತಿ ನಿಯಮಗಳು ಹಾಗೂ ಇನ್ನಿತರ ಪರಭಾರೆ ನಿಷೇಧ ವ್ಯಾಪ್ತಿಗೆ ಒಳಪಡುವುದಿಲ್ಲ.

ಕರ್ನಾಟಕ ಭೂ ಕಂದಾಯ ಕಾಯ್ದೆ 1961ರ ಕಲಂ 109 (1) (ii) ಪ್ರಕಾರ ಶೈಕ್ಷಣಿಕ ಸಂಸ್ಥೆಗಳಿಗೆ 2 ಯುನಿಟ್‌ಗಳವರೆಗೆ ಜಮೀನು ಹೊಂದಲು ಅವಕಾಶ ಕಲ್ಪಿಸಿದೆ. ಈ ಪ್ರಸ್ತಾವನೆ ಕರ್ನಾಟಕ ತಿದ್ದುಪಡಿ ಕಾಯ್ದೆ 1995ರ ಪ್ರಕಾರ ಕಲಂ 109 (1) (ii) ಪ್ರಕಾರ ಮತ್ತು ಕರ್ನಾಟಕ ಭೂ ಸುಧಾರಣೆ ತಿದ್ದುಪಡಿ ಕಾಯಿದೆ 1961 ಕಲಂ 63, 79ಎ, 79ಬಿ ಅಥವಾ 80ಕ್ಕೆ ವಿನಾಯ್ತಿ ನೀಡಿ ಬೆಂಗಳೂರು ಪೂರ್ವ ತಾಲ್ಲೂಕು, ಬಿದರಹಳ್ಳಿ ಹೋಬಳಿ,

ಮೇಡಹಳ್ಳಿ ಗ್ರಾಮದ ಸ.ನಂ.2, 4, 5 ಮತ್ತು 22/ 2ಎ ರಲ್ಲಿನ ಒಟ್ಟು 3-24 ಎಕರೆ/ ಗುಂಟೆ ಜಮೀನನ್ನು ನಿರ್ದೇಶಕರು, ಆಶಾನಿವಾಸ್ ಸೋಷಿಯಲ್ ಸರ್ವೀಸ್ ಸೆಂಟರ್, ನಂ.9, ರಟ್‌ಲ್ಯಾಂಡ್ ಗೇಟ್, 5ನೇ ಬೀದಿ, ಚೆನ್ನೈ, ರವರಿಗೆ ಮಕ್ಕಳ ಮತ್ತು ಮಹಿಳಾ ಪುರ್ನವಸತಿ ಕೇಂದ್ರ ನಿರ್ಮಿಸುವ ಉದ್ದೇಶಕ್ಕಾಗಿ ಖರೀದಿಸಲು ಕರ್ನಾಟಕ ಭೂ ಕಂದಾಯ ಕಾಯ್ದೆ 1961ರ ಕಲಂ 109 (1) (ii) ರಡಿ ಹಾಗೂ ಸರ್ಕಾರದ ತಿದ್ದುಪಡಿ ಅಧಿಸೂಚನೆ ಸಂಖ್ಯೆ: ಶಾಇ 47/ ಶಾಸನ/ 2001: ಬೆಂಗಳೂರು, ದಿನಾಂಕ: 23.04.2003ರಂತೆ ಮಕ್ಕಳ ಮತ್ತು ಮಹಿಳಾ ಪುನರ್ವಸತಿ ಕೇಂದ್ರ ನಿರ್ಮಿಸುವ ಉದ್ದೇಶಕ್ಕಾಗಿ ಈ ಕೆಳಕಂಡ ಷರತ್ತುಗಳಿಗೆ ಒಳಪಡಿಸಿ ಅನುಮತಿ ನೀಡಿದೆ.

**ಷರತ್ತುಗಳು**

1. ಯಾವ ಉದ್ದೇಶಕ್ಕಾಗಿ ಜಮೀನನ್ನು ಖರೀದಿಸಲು ಅನುಮತಿ ನೀಡಲಾಗಿದೆಯೋ ಅದೇ ಉದ್ದೇಶಕ್ಕಾಗಿ ಸದರಿ ಜಮೀನನ್ನು ಎರಡು ವರ್ಷದೊಳಗಾಗಿ ಉಪಯೋಗಿಸಿಕೊಳ್ಳತಕ್ಕದ್ದು ಮತ್ತು ಈ ಬಗ್ಗೆ ತಹಶೀಲ್ದಾರ್ ರವರ ಮೂಲಕ ಈ ಕಛೇರಿಗೆ ಲಿಖಿತವಾಗಿ ಮಾಹಿತಿ ನೀಡತಕ್ಕದ್ದು.
2. ವಿನಾಯಿತಿ ಪಡೆದವರು ಸರ್ಕಾರ ಅಥವಾ ಯಾವುದೇ ಷೆಡ್ಯೂಲ್ ಬ್ಯಾಂಕ್ ಅಥವಾ ಸಹಕಾರಿ ಕೃಷಿ ಮತ್ತು ಗ್ರಾಮೀಣಾಭಿವೃದ್ಧಿ ಬ್ಯಾಂಕ್ ಒಂದಕ್ಕೆ ಅಥವಾ ಕಂಪನಿ ಕಾಯಿದೆ 1995 ಕಲಂ 3ರಲ್ಲಿ ಹೇಳಿರುವಂತೆ ಶೇಕಡಾ 55 ಪೆಯಿಡ್ ಅಫ್ ಷೇರು ಬಂಡವಾಳ ಹೊಂದಿರುವ ಕೇಂದ್ರ ಸರ್ಕಾರ ಅಥವಾ ರಾಜ್ಯ ಸರ್ಕಾರದ ಸಂಘ ಸಂಸ್ಥೆ ಒಂದಕ್ಕೆ ಖಾತರಿ ನೀಡಿ ಅಡಮಾನ ಹಾಗೂ ಇತರೆ ಹೊಣೆ ಮಾಡಿ ಸಾಲ ಪಡೆಯುವುದನ್ನು ಹೊರತುಪಡಿಸಿ ಸದರಿ ಜಮೀನನ್ನು ನಿಗದಿತ ಉದ್ದೇಶಕ್ಕಲ್ಲದೆ ಬೇರೆ ಉದ್ದೇಶಕ್ಕೆ ಬಳಸತಕ್ಕದ್ದಲ್ಲ.
3. ಸದರಿ ಜಮೀನು ಸಿ.ಡಿ.ಪಿ. ಪ್ರಕಾರ ಹಸಿರು ವಲಯದಲ್ಲಿ ಬರುತ್ತಿದ್ದು, ಸದರಿ ಸಂಸ್ಥೆಗೆ (ಮಕ್ಕಳ ಮತ್ತು ಮಹಿಳಾ ಪುರ್ನವಸತಿ ಕೇಂದ್ರ ನಿರ್ಮಿಸುವ ಉದ್ದೇಶಕ್ಕಾಗಿ) ಉಪಯೋಗಿಸಿಕೊಳ್ಳಲು ಭೂ ಬದಲಾವಣೆ ಅವಶ್ಯಕವಿದ್ದಲ್ಲಿ ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರದಿಂದ ಭೂ ಬದಲಾವಣೆ ಮಾಡಿಸಿಕೊಳ್ಳತಕ್ಕದ್ದು.
4. ಈ ಜಮೀನನ್ನು ವ್ಯವಸಾಯದಿಂದ ವ್ಯವಸಾಯೇತರ ಉದ್ದೇಶಕ್ಕಾಗಿ ಪರಿವರ್ತಿಸಿಕೊಳ್ಳಲು ಭೂ ಕಂದಾಯ ಕಾಯಿದೆ 1964ರ ಕಲಂ 95ರಂತೆ ಜಿಲ್ಲಾಧಿಕಾರಿಗಳಿಂದ ಮಂಜೂರಾತಿ ಆದೇಶ ಪಡೆಯತಕ್ಕದ್ದು.
5. ಈ ಜಮೀನು ನಗರಾಭಿವೃದ್ಧಿ ಪ್ರಾಧಿಕಾರ ಸಿ.ಡಿ.ಪಿ., ಒ.ಡಿ.ಪಿ. ಮತ್ತು ಹಸಿರು ವಲಯ ವ್ಯಾಪ್ತಿಯೊಳಗೆ ಬಂದರೆ ಅದರಂತೆ ಅನುಮತಿ ಪಡೆದು ಉಪಯೋಗಿಸಿಕೊಳ್ಳತಕ್ಕದ್ದು.
6. ಈ ಅನುಮತಿ ಭೂ ಸುಧಾರಣೆ ಕಾಯಿದೆ 1961ರ ಕಲಂ 109ರನ್ವಯ ಮಾತ್ರ ನೀಡಿರುತ್ತದೆ. ಬೇರೆ ಕಾನೂನುಗಳ ಉಲ್ಲಂಘನೆಯಾದಲ್ಲಿ ಸಂಬಂಧಿಸಿದ ಕಾಯ್ದೆಯಡಿ ಅಗತ್ಯ ಕ್ರಮ ಜರುಗಿಸಲು ಅವಕಾಶವಿರುತ್ತದೆ.
7. ಮೇಲಿನ ಷರತ್ತುಗಳು ಉಲ್ಲಂಘನೆಯಾದಲ್ಲಿ ಈಗ ನೀಡಲಾದ ಅನುಮತಿಯನ್ನು ರದ್ದುಪಡಿಸಲಾಗುವುದು ಮತ್ತು ಪ್ರಸ್ತಾಪಿತ ಭೂಮಿಯನ್ನು ಋಣ ಮುಕ್ತವಾಗಿ ಸರ್ಕಾರದಲ್ಲಿ ನಿಹಿತ ಮಾಡಲಾಗುವುದು.

ವಿಶೇಷ ಜಿಲ್ಲಾಧಿಕಾರಿಗಳು,

ಪಿ.ಆರ್.937 ಬೆಂಗಳೂರು ಜಿಲ್ಲೆ, ಬೆಂಗಳೂರು.

## ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತ

## ಕಾರ್ಯನಿರ್ವಾಹಕ ಅಭಿಯಂತರರು, ಬೃಹತ್ ಕಾಮಗಾರಿ ವಿಭಾಗ, ಕವಿಪ್ರನಿನಿ, ರವರ ಕಛೇರಿ

## ಪ್ರಕಟಣೆ

### ಸಂಖ್ಯೆ:ಕಾನಿಅ/ ಬೃ.ಕಾವಿ/ ಗು/ ಸಕಾಅ(ಒ) 2006-07/ 510-11, ದಿನಾಂಕ:9ನೇ ಜೂನ್, 2006

ವಿದ್ಯುತ್ ಪೂರೈಕೆ ಅಧಿನಿಯಮ 1948 ಸೆಕ್ಷನ್ 28 ಮತ್ತು 18 (ಇ) ಅನುಸಾರವಾಗಿ ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತವು ಯೋಜನೆಗಳನ್ನು ರೂಪಿಸಿದೆ. ಈ ಯೋಜನೆಯನ್ನು ಅದೇ ಅಧಿನಿಯಮದ ಸೆಕ್ಷನ್ 29(2)ಕ್ಕೆ ಅನುಸಾರವಾಗಿ ಇಲ್ಲಿ ಪ್ರಕಟಿಸಲಾಗಿದೆ ಈ ಪ್ರಕಟಣೆಯನ್ನು ಲೈಸೆನ್ಸ್ ಹೊಂದಿರುವವರು ಮತ್ತು ಇನ್ನಿತರೆ ಯಾವುದೇ ಸಂಬಂಧಿಸಿದ ವ್ಯಕ್ತಿಗಳ ಮಾಹಿತಿಗಾಗಿ ನೀಡಲಾಗಿದೆ.

**1) ಯೋಜನೆಯ ಹೆಸರು:** ಗುಲ್ಬರ್ಗಾ ಜಿಲ್ಲೆಯ ಸುರಪುರ ತಾಲ್ಲೂಕು ಕೆಂಭಾವಿಯಲ್ಲಿ 2x10 ಎಂ.ವಿ.ಎ. 110/ 11 ಕೆ.ವಿ. ವಿದ್ಯುತ್ ಉಪಕೇಂದ್ರ ಸ್ಥಾಪಿಸುವ ಮತ್ತು 220 ಕೆ.ವಿ. ಶಹಾಪುರ ವಿದ್ಯುತ್ ಕೇಂದ್ರದಿಂದ ಪ್ರಸ್ತಾವಿತ 110 ಕೆ.ವಿ. ಕೆಂಭಾವಿ ವಿದ್ಯುತ್ ಕೇಂದ್ರಕ್ಕೆ ಹಾಗೂ 38.950 ಕಿ.ಮಿ.ಗಳ ದೂರ ಸದರಿ ಇರುವ 110 ಕೆ.ವಿ. ಸಿಂಗಲ್ ಸರ್ಕ್ಯೂಟ್ ಮಾರ್ಗವನ್ನು ಡಬಲ್ ಸರ್ಕ್ಯೂಟ್ ಗೋಪುರಗಳ ಮೇಲೆ ಲಿಂಕ್ಸ್ ಕಂಡಕ್ಟರ್ ಉಪಯೋಗಿಸಿರುವ ಮಾರ್ಗಕ್ಕೆ ಹೆಚ್ಚುವರಿಯಾಗಿ 0.830 ಕಿ.ಮೀ.ಗಳ ವಿದ್ಯುತ್ ಮಾರ್ಗವನ್ನು ನಿರ್ಮಿಸುವುದು.

**2) ಯೋಜನೆಯ ಪ್ರಯೋಜನಗಳು:** ಕೆಂಭಾವಿ, ಮತ್ತು ಅಕ್ಕ-ಪಕ್ಕದ ಗ್ರಾಮಗಳಿಗೆ ಒಳ್ಳೆಯ ಗುಣಮಟ್ಟದ ವಿದ್ಯುತ್ ಸರಬರಾಜು ಮಾಡುವುದು.

**3) ಹಾದು ಹೋಗುವ ಪ್ರದೇಶಗಳು:** ಹತ್ತಿಗುಡುರು, ರಸ್ತಾಪುರ, ತಿಮ್ಮಾಪುರ, ಸಗರ್, ಮಹಲ್ ರೋಜಾ, ದರಿಯಾಪುರ, ಗಂಗನಾಳ, ಶೆಟ್ಟಿಕೆರಾ, ವನದುರ್ಗ, ಚೆನ್ನುರ, ಅಲ್‌ಧಳ್ಳಿ, ಗೌಡಗೇರಿ, ನಗನೂರ, ಕೆಂಭಾವಿ, ಯಾಳಗಿ.

**4) ಅಂದಾಜು ವೆಚ್ಚ:** ರೂ.755.19 ಲಕ್ಷಗಳು.

ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತ ಮೇಲೆ ತಿಳಿಸಿರುವ ಯೋಜನೆಯನ್ನು ನಿರ್ವಹಿಸಲು 1885ರ ಭಾರತೀಯ ಟೆಲಿಗ್ರಾಫ್ ಕಾಯ್ದೆ (1885ರ 13) ಭಾಗ 3ರ ಅನ್ವಯ ಟೆಲಿಗ್ರಾಫ್ ಪ್ರಾಧಿಕಾರವು ಪಡೆದುಕೊಂಡಿರುವ ಎಲ್ಲಾ ಅಧಿಕಾರವನ್ನು ನಿಗಮವು ಹೊಂದಿರುವುದು ಮತ್ತು ಚಲಾಯಿಸುವ ಹಕ್ಕನ್ನು ಪಡೆದಿರುವುದು. ಯೋಜನೆಯ ಬಗ್ಗೆ ಆಕ್ಷೇಪಣೆಗಳು ಏನಾದರೂ ಇದ್ದಲ್ಲಿ ಅವುಗಳನ್ನು ಪರಿಗಣಿಸಲು ಕಾರ್ಯನಿರ್ವಾಹಕ ಅಭಿಯಂತರರು, (ವಿ), ಬೃಹತ್ ಕಾಮಗಾರಿ ವಿಭಾಗ, ಕವಿಪ್ರನಿನಿ, ಗುಲ್ಬರ್ಗಾ ಇವರಿಗೆ ಈ ಪ್ರಕಟಣೆ ಪ್ರಕರವಾದ ದಿನಾಂಕದಿಂದ ಎರಡು ತಿಂಗಳುಗಳ ಒಳಗೆ ತಲುಪುವಂತೆ ಕಳುಹಿಸಿಕೊಡಬೇಕು.

ಸ್ಥಳ: ಗುಲ್ಬರ್ಗಾ

ತಾ: ಕಾರ್ಯನಿರ್ವಾಹಕ ಅಭಿಯಂತರರು (ವಿ),

ಪಿ.ಡಿ.64 ಬೃಹತ್ ಕಾಮಗಾರಿ ವಿಭಾಗ, ಕವಿಪ್ರನಿನಿ.